KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಆಗಸ್ಟ್ ೫, ೨೦೧೦ (ಶ್ರಾವಣ ೧೪, ಶಕ ವರ್ಷ ೧೯೩೨) | ಸಂಚಿಕೆ ೩೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಖಾನಾಪುರ ತಾಲ್ಲೂಕಿನ ಘಸ್ಪೋಳ್ಳಿ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009, ದಿನಾಂಕ: 05–02–2009.
2) ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2009–10/1338, ದಿನಾಂಕ: 06–03–2010.
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/744 ದಿನಾಂಕ 04–03–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಬಾರ್ಡ್ ಆರ್.ಐ.ಡಿ.ಎಫ್–14ರಲ್ಲಿ ರೂ.14477.85 ಲಕ್ಷ ರೂ.ಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುವ 260 ಕಾಮಗಾರಿಗಳ ಪೈಕಿ ಬೆಳಗಾಂ ಜಿಲ್ಲೆ, ಖಾನಾಪುರ ತಾಲ್ಲೂಕಿನ ಘಸ್ಪೋಳ್ಳಿ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿ ಸಹ ಒಂದಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ನೋಂದಣಿ ಸಂಖ್ಯೆ: 127/2009–10ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಬೆಳಗಾಂ ಜಿಲ್ಲಾ ಟೆಂಡರ್ ಬುಲೆಟನ್ | ದಿನಾಂಕ 30–11–2009 |
| 2 | ಕನ್ನಡ ಪ್ರಭ, ಡೆಕ್ಕನ್ ಹೆರಾಲ್ಡ್ ಮತ್ತು ಸಂಯುಕ್ತ ಕರ್ನಾಟಕ ದಿನಪತ್ರಿಕೆಗಳು | ದಿನಾಂಕ 06–12–2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 4 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ತಾಂತ್ರಿಕ ಬಿಡ್‌ಗಳನ್ನು ದಿನಾಂಕ 07–01–2010ರಂದು ತೆರೆಯಲಾಗಿದ್ದು, ಇಬ್ಬರೂ ಗುತ್ತಿಗೆದಾರರು ಅರ್ಹರೆಂದು ಪರಿಗಣಿಸಿ ಇವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 28–01–2010 ರಂದು ತೆರೆಯಲಾಗಿದೆ. ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ.75,36,147/– |
|---|---|---|---|---|
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗೆ ಇಡಲಾದ ಪರಿಷ್ಕೃತ ಮೊತ್ತ | | | | ರೂ.73,40,510/– |
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಆರ್.ಡಿ. ಪದ್ಮಣ್ಣವರ 1ನೇ ದರ್ಜೆ ಗುತ್ತಿಗೆದಾರರು | ರೂ.90,36,438/– | 19.91 ಹೆಚ್ಚು | 23.10 ಹೆಚ್ಚು |
| 2 | ಎ.ಎಸ್. ಸವಸುದ್ದು 1ನೇ ದರ್ಜೆ ಗುತ್ತಿಗೆದಾರರು | ರೂ. 95,66,295/– | 26.94 ಹೆಚ್ಚು | 30.32 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. (1)ರಲ್ಲಿರುವ ಶ್ರೀ ಆರ್.ಡಿ. ಪದ್ಮಣ್ಣವರ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ಮೊತ್ತ ರೂ. 90,36,438–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳು ಮಂಜೂರಾದ ಅಂದಾಜಿನ ದರ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲೆ ಶೇಕಡ 23.10 ರಷ್ಟು ಹೆಚ್ಚಾಗಿದ್ದರಿಂದ, ದರಗಳನ್ನು ಕಡಿಮೆ ಮಾಡಿಸುವ ಸಲುವಾಗಿ ಮುಖ್ಯ ಇಂಜಿನಿಯರ್‌ರವರ ಮಟ್ಟದಲ್ಲಿ ಗುತ್ತಿಗೆದಾರರೊಂದಿಗೆ ನಡೆಸಲಾದ ಸಂಧಾನದಲ್ಲಿ ಗುತ್ತಿಗೆದಾರರು ಚಾಲ್ತಿ ದರಗಳ ಮೇಲೆ ಟೆಂಡರ್ ಮೊತ್ತಕ್ಕೆ ಕಾಮಗಾರಿ ನಿರ್ವಹಿಸಲು ಒಪ್ಪಿರುತ್ತಾರೆ. ಆದರೆ, ಚಾಲ್ತಿ ದರಪಟ್ಟಿಯ ಮೇಲೆ ಶೇಕಡ 6ಕ್ಕಿಂತ ಹೆಚ್ಚುವರಿ ದರವನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರಿಗೆ ಅಧಿಕಾರ ಇಲ್ಲದಿರುವುದರಿಂದ, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23–03–2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 73,40,510–00ಗಳ ಮೇಲೆ ಶೇಕಡ 13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 83,31,479–00 ಗಳಿಗೆ ಕಾಮಗಾರಿಯನ್ನು ಶ್ರೀ ಆರ್.ಡಿ. ಪದ್ಮಣ್ಣವರ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಗಿದೆ. ಈ ನಿರ್ಧಾರಕ್ಕೆ ಗುತ್ತಿಗೆದಾರರು ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 20 ಕೆಜಿದು 2010 ಬೆಂಗಳೂರು, ದಿನಾಂಕ : 23ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬೆಳಗಾಂ ಜಿಲ್ಲೆ, ಖಾನಾಪುರ ತಾಲ್ಲೂಕಿನ ಘಸ್ತೋಳ್ಳಿ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.73,40,510–00ಗಳ ಮೇಲೆ ಶೇಕಡ 13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 83,31,479–00ಗಳಿಗೆ (ಎಂಭತ್ಮೂರು ಲಕ್ಷದ ಮೂವತ್ತೊಂದು ಸಾವಿರದ ನಾನೂರ ಎಪ್ಪತ್ತೊಂಭತ್ತು ರೂ.ಗಳು ಮಾತ್ರ) ಶ್ರೀ ಆರ್.ಡಿ. ಪದ್ಮಣ್ಣವರ 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಪಿ.ಆರ್.1081

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸುಧಾರಕ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು, ಐನಾಪುರ ಶೇಡಬಾಳ ರಸ್ತೆಯ ಲಕ್ಷ್ಮೀ ಗುಡಿಯ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009, ದಿನಾಂಕ: 05–02–2009.
2) ದಿನಾಂಕ 06–03–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2009–10/1367,
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/09–10/744 ದಿನಾಂಕ 24–03–2009.

**ಪ್ರಸ್ತಾವನೆ :**

ನಬಾರ್ಡ್ ಆರ್.ಐ.ಡಿ.ಎಫ್–14ರಲ್ಲಿ ರೂ.14477.85 ಲಕ್ಷ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುವ 260 ಕಾಮಗಾರಿಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 05–02–2009ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಈ ಆದೇಶದಲ್ಲಿ 88.50 ಲಕ್ಷ ರೂ.ಗಳ ಅಂದಾಜು ಮೊತ್ತದ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು, ಐನಾಪುರ ಶೇಡಬಾಳ ರಸ್ತೆಯ ಲಕ್ಷ್ಮೀ ಗುಡಿಯ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಬೆಳಗಾಂ ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ 09–11–2009 |
| 2 | ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆಗಳು | ದಿನಾಂಕ 30–11–2009 |

ಅನಿವಾರ್ಯ ಕಾರಣದಿಂದಾಗಿ ಟೆಂಡರನ್ನು ಮುಂದೂಡಿದ್ದು, ಅಂತಿಮವಾಗಿ ಟೆಂಡರ್‌ನ ಪ್ರಕಟಣೆಯನ್ನು ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆಗಳಲ್ಲಿ ದಿನಾಂಕ 08–12–2009ರಂದು ಪ್ರಕಟಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 28 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು 3 ಜನ ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್‌ಗಳನ್ನು ದಿನಾಂಕ 04–01–2010ರಂದು ತೆರೆಯಲಾಗಿ ಒಬ್ಬ ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದರಿಂದ, ಇವರುಗಳ ಆರ್ಥಿಕ ಬಿಡ್‌ನ್ನು ದಿನಾಂಕ 28–01–2010 ರಂದು ತೆರೆಯಲಾಗಿದೆ. ವಿವರ ಕೆಳಕಂಡಂತಿದೆ:

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.70,32,544/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗೆ ಇಡಲಾದ ಪರಿಷ್ಕೃತ ಮೊತ್ತ | | | ರೂ.66,99,705/– |
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಆಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಎಸ್.ಆರ್. ಕಪ್ಪಲಗುದ್ದಿ 1ನೇ ದರ್ಜೆ ಗುತ್ತಿಗೆದಾರರು | ರೂ.87,66,146/– | 30.84 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್.ಆರ್. ಕಪ್ಪಲಗುದ್ದಿ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ಮೊತ್ತ ರೂ. 87,66,146–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳು ಮಂಜೂರಾದ ಅಂದಾಜಿನ ದರ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲೆ ಶೇಕಡ 30.84 ರಷ್ಟು ಹೆಚ್ಚಾಗಿದ್ದರಿಂದ, ದರಗಳನ್ನು ಕಡಿಮೆ ಮಾಡಿಸುವ ಸಲುವಾಗಿ ಮುಖ್ಯ ಇಂಜಿನಿಯರ್‌ರವರ ಮಟ್ಟದಲ್ಲಿ ಗುತ್ತಿಗೆದಾರರೊಂದಿಗೆ ನಡೆಸಲಾದ ಸಂಧಾನದಲ್ಲಿ ಗುತ್ತಿಗೆದಾರರು ಚಾಲ್ತಿ ದರಗಳ ಮೇಲೆ ಟೆಂಡರ್ ಮೊತ್ತಕ್ಕೆ ಕಾಮಗಾರಿ ನಿರ್ವಹಿಸಲು ಒಪ್ಪಿರುತ್ತಾರೆ. ಆದರೆ, ಚಾಲ್ತಿ ದರಪಟ್ಟಿಯ ಮೇಲೆ ಶೇಕಡ 6ಕ್ಕಿಂತ ಹೆಚ್ಚುವರಿ ದರವನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರಿಗೆ ಅಧಿಕಾರ ಇಲ್ಲದಿರುವುದರಿಂದ, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23-03-2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 66,99,705-00ಗಳ ಮೇಲೆ ಶೇಕಡ 12.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 75,53,917-00 ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಆರ್. ಕಪ್ಪಲಗುದ್ದಿ, 1ನೇ ದರ್ಜೆ ಗುತ್ತಿಗೆದಾರರು, ಗೋಕಾಕ್ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಗಿದೆ. ಈ ನಿರ್ಧಾರಕ್ಕೆ ಗುತ್ತಿಗೆದಾರರು ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 13 ಅಪಿಬಂ 2010 ಬೆಂಗಳೂರು, ದಿನಾಂಕ : 23ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು, ಐನಾಪುರ ಶೇಡಬಾಳ ರಸ್ತೆಯ ಲಕ್ಷ್ಮೀ ಗುಡಿಯ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.66,99,705-00ಗಳ ಮೇಲೆ ಶೇಕಡ 12.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 75,53,917-00 ಗಳಿಗೆ (ಎಪ್ಪತ್ತೈದು ಲಕ್ಷದ ಐವತ್ಮೂರು ಸಾವಿರದ ಒಂಭೈನೂರು ಹದಿನೇಳು ರೂ.ಗಳು ಮಾತ್ರ) ಶ್ರೀ ಎಸ್.ಆರ್. ಕಪ್ಪಲಗುದ್ದಿ, 1ನೇ ದರ್ಜೆ ಗುತ್ತಿಗೆದಾರರು, ಗೋಕಾಕ್ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಪಿ.ಆರ್.1082

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸುಧಾರಕ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಹಕಾರ ಸಚಿವಾಲಯ

**ವಿಷಯ :** ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1) ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಆರ್/ಎಸ್‌ಒಆರ್/ಕಲಂ/25/ವಿಚಾರಣೆ/2008-09 ದಿನಾಂಕ 15-12-2009.
2) ಕಾರಣ ಕೇಳುವ ನೋಟೀಸ್ ಸಂಖ್ಯೆ: ಸಇ 165 ಸಸಂನೋ 2009 ದಿನಾಂಕ: 13-01-2010.
3) ಕಾರ್ಯದರ್ಶಿ, ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 29-01-2010ರ ಲಿಖಿತ ಹೇಳಿಕೆ.
4) ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಆರ್/ಎಸ್‌ಒಆರ್/ಕಲಂ/25/ವಿಚಾರಣೆ/23/2009-10 ದಿನಾಂಕ 26-02-2010.
5) ಸರ್ಕಾರದ ಪತ್ರ ಸಂಖ್ಯೆ: ಸಇ 165 ಸಸಂನೋ 2009 ದಿನಾಂಕ: 26-03-2010.
6) ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್‌ಎಸ್‌ಒ ಆರ್/213/2009-10 ದಿನಾಂಕ: 27-03-2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: 1 ರ ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರು ತಮ್ಮ ಪತ್ರದಲ್ಲಿ ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ನಂ. 650, 17ನೇ ಸಿ-ಕ್ರಾಸ್, 10ನೇ ಮುಖ್ಯರಸ್ತೆ, ಸಿ.ಎಂ.ಹೆಚ್. ರೋಡ್, ಇಂದಿರಾ ನಗರ, ಬೆಂಗಳೂರು ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರಡಿಯಲ್ಲಿ ನೋಂದಣಿ ಸಂಖ್ಯೆ: 716/1999-2000 ದಿನಾಂಕ: 22-09-1999 ರಂದು ನೋಂದಣಿಯಾಗಿದ್ದು,

ಸದರಿ ಸಂಸ್ಥೆಯು ಕಾಯ್ದೆ ಕಲಂ 13 ರ ಪ್ರಕಾರ ಪ್ರತಿ ವರ್ಷ ಸಂಘದ ಲೆಕ್ಕಪತ್ರಗಳು, ಸರ್ವಸದಸ್ಯರ ಸಭೆ ನಡವಳಿಗಳು, ಕಾರ್ಯಕಾರಿ ಸಮಿತಿ ಪಟ್ಟಿಯನ್ನು ಫೈಲಿಂಗ್ ಮಾಡದ ಕಾರಣ ಸದರಿ ಸಂಸ್ಥೆಗೆ ಕಾರಣ ಕೇಳಿ ನೋಟೀಸನ್ನು ದಿನಾಂಕ 19-09-2008 ರಂದು ಜಾರಿ ಮಾಡಿ ವಿವರಣೆ ಕೇಳಿದಾಗ, ಸದರಿ ಸಂಘದ ಫೌಂಡರ್ ಪ್ರೆಸಿಡೆಂಟ್ ರವರು ದಿನಾಂಕ 13-10-2008 ರಂದು ಪತ್ರ ಬರೆದು ಸಂಘದ ಕಾರ್ಯದರ್ಶಿಗಳು ಕೇಂದ್ರಸ್ಥಾನದಲ್ಲಿ ಇಲ್ಲದಿರುವ ಕಾರಣ ನೋಟೀಸಿಗೆ ಉತ್ತರಿಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. ಈ ಮಧ್ಯೆ ಶ್ರೀ ಅಶೋಕ್‌ಚಂದ್, ಅಧ್ಯಕ್ಷರು ಹಾಗೂ ಇತರರು ದೂರು ಅರ್ಜಿಯನ್ನು ಸಲ್ಲಿಸಿ, ಸಂಘಕ್ಕೆ ಚುನಾವಣೆ ನಡೆಸದಿರುವುದು. ವಾರ್ಷಿಕ ಲೆಕ್ಕಪತ್ರಗಳನ್ನು ಫೈಲಿಂಗ್ ಮಾಡದಿರುವುದು, ಕಾರ್ಯದರ್ಶಿ ಕೇಂದ್ರಸ್ಥಾನದಲ್ಲಿರದೆ ಸಂಘದ ಲೆಕ್ಕಪತ್ರಗಳನ್ನು ಸಲ್ಲಿಸುವುದರಲ್ಲಿ ತೊಡಕು ಉಂಟಾಗಿರುವುದರಿಂದ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ ಕಲಂ 25ರ ಪ್ರಕಾರ ವಿಚಾರಣೆ ನಡೆಸಬೇಕೆಂದು ಮತ್ತು ಇತರೆ 7 ಆರೋಪಗಳನ್ನು ಪಟ್ಟಿ ಮಾಡಿ ತಮ್ಮ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಹಾಗೂ ಇದರೊಂದಿಗೆ ಇತರೆ ಆರೋಪಗಳನ್ನು ಸಹ ದಿನಾಂಕ 17-01-2009 ರಲ್ಲಿ ಸಲ್ಲಿಸಿರುತ್ತಾರೆ.

ಈ ದೂರು ಅರ್ಜಿಗಳನ್ನು ಪರಿಶೀಲಿಸಿದಾಗ, ಸಂಘದ ಕಾರ್ಯಕಾರಿ ಸಮಿತಿಯಲ್ಲಿ ಹೊಂದಾಣಿಕೆ ಇಲ್ಲದೆ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಹಾಗೂ ಸಂಘದ ಬೈಲಾ ಮತ್ತು ನಿಯಮಾವಳಿಗಳ ರೀತ್ಯ ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಸಂದೇಹ ಉಂಟಾಗಿದ್ದು, ಸಂಘದ ಆರ್ಥಿಕ ಲೆಕ್ಕಪತ್ರಗಳ ವ್ಯತ್ಯಾಸ/ದುರುಪಯೋಗ ಸಾಧ್ಯತೆಗಳು ಇರಬಹುದು ಎಂದು ಮೇಲ್ನೋಟಕ್ಕೆ ಕಂಡು ಬಂದಿದ್ದು, ಸಂಘದ ಸದಸ್ಯರ ಹಿತದೃಷ್ಟಿಯಿಂದ ಹಾಗೂ ದೂರಿನಲ್ಲಿರುವ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 25 ರಂತೆ ವಿಚಾರಣೆಗೆ ದಿನಾಂಕ: 11-08-2009 ರಂದು ಆದೇಶಿಸಲಾಗಿದ್ದು, ವಿಚಾರಣಾಧಿಕಾರಿಗಳು ತಮ್ಮ ದಿನಾಂಕ: 22-11-2009 ರ ವಿಚಾರಣಾ ವರದಿಯಲ್ಲಿ ಒಟ್ಟು 7 ಆರೋಪಗಳಲ್ಲಿ 6ನೇ ಆರೋಪವನ್ನು ಹೊರತುಪಡಿಸಿ ಉಳಿದ ಎಲ್ಲಾ ಆರು ಆರೋಪಗಳು ಸಾಬೀತಾಗಿರುತ್ತದೆ ಎಂದು ಅಭಿಪ್ರಾಯ ಪಡುತ್ತಾ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ ಕಲಂ 27ಎ ರನ್ವಯ ಆಡಳಿತಾಧಿಕಾರಿಯನ್ನು ನೇಮಕ ಮಾಡಬಹುದೆಂದು ಸಹ ವರದಿಯಲ್ಲಿ ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳಾದ ಶ್ರೀ ಎಂ.ಡಿ ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ನಗರ ಜಿಲ್ಲೆ-2, ಬೆಂಗಳೂರು ಇವರು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ನಮೂದಿಸಿರುವ ಆರೋಪಗಳು ಗಂಭೀರ ಸ್ವರೂಪದ ಆರೋಪಗಳಾಗಿದ್ದು, ಸಂಘದ ವ್ಯವಹಾರದಲ್ಲಿ ಕಾನೂನು ಬಾಹಿರವಾಗಿ ಹಣಕಾಸಿನ ನಿರ್ವಹಣೆಯನ್ನು ಮತ್ತು ವಂತಿಕೆಯನ್ನು ವಸೂಲಿ ಮಾಡುತ್ತಿರುವುದು ಹಾಗೂ ಆಡಳಿತ ಕಾರ್ಯನಿರ್ವಹಣೆಯನ್ನು ಸಮಗ್ರವಾಗಿ ನಿರ್ವಹಣೆ ಮಾಡದೇ, ಸಂಘದ ನೀತಿ ನಿಯಮಗಳು ಹಾಗೂ ನೋಂದಣಿ ಕಾಯ್ದೆ ಉಲ್ಲಂಘನೆ ಮಾಡಿರುವುದು ಸ್ಪಷ್ಟವಾಗಿದ್ದು, ಇದರಿಂದ, ಸದಸ್ಯರು ಮತ್ತು ಸಂಸ್ಥೆಯ ಅಭಿವೃದ್ದಿಗೆ ಮಾರಕವಾದ ಹಾಗೂ ದುಷ್ಪರಿಣಾಮ ಬೀರುವ ಸಾಧ್ಯತೆ ಇರುವುದು ಮತ್ತು ಮುಂದೆ ಆಗಬಹುದಾದ ಅನಾಹುತಗಳನ್ನು ತಪ್ಪಿಸಲು ಸಂಘದ ಹಿತದೃಷ್ಟಿಯಿಂದ ಸಂಘಕ್ಕೆ ಶ್ರೀ ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ನಗರ ಜಿಲ್ಲೆ-2, ಬೆಂಗಳೂರು ಇವರನ್ನೇ ಆಡಳಿತಾಧಿಕಾರಿಯನ್ನಾಗಿ ನೇಮಿಸಬಹುದಾಗಿದೆ ಎಂದು ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರು ಅಭಿಪ್ರಾಯಪಟ್ಟು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ಈ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ನ್ನು ಉಲ್ಲಂಘನೆ ಮಾಡಿರುವ ಬಗ್ಗೆ ತಿಳಿಸುತ್ತಾ, ಸಂಘದ ಹಿತದೃಷ್ಟಿಯಿಂದ ಹಾಗೂ ಸಂಘದ ಕೆಲಸಕಾರ್ಯಗಳು ಸುಸೂತ್ರವಾಗಿ ನಡೆಸಲು ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನೀವು ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದು ದಿನಾಂಕ: 13-01-2010 ರಲ್ಲಿ ಕಾರಣ ಕೇಳುವ ನೋಟೀಸು ಜಾರಿಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರಲ್ಲಿ ಅಧ್ಯಕ್ಷರು, ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 29-01-2010 ರ ಲಿಖಿತ ಹೇಳಿಕೆ ಸಲ್ಲಿಸಿ, ವಿಚಾರಣಾಧಿಕಾರಿಗಳ ವರದಿಯ ಮೇಲೆ ಆಡಳಿತಾಧಿಕಾರಿಗಳನ್ನು ನೇಮಕ ಮಾಡಲು ಶಿಫಾರಸ್ಸು ಮಾಡಿರುವುದು ಸಮಂಜಸವಾಗಿರುವುದಿಲ್ಲ. ಆಡಳಿತ ಮಂಡಳಿಗೆ ಸೂಕ್ತ ಕಾಲಾವಕಾಶ ನೀಡಿ ವಿಚಾರಣೆ ಮಾಡಿದ ನಂತರ ವಿಚಾರಣಾಧಿಕಾರಿಗಳ ನೇಮಕಾತಿಗೆ ಕ್ರಮ ವಹಿಸಲು ಕೋರಿರುತ್ತಾರೆ. ಸದರಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಮುನ್ನ ಸಂಘದ ಹೇಳಿಕೆಯನ್ನು ಮತ್ತು ಸಂಘದ ವಿರುದ್ಧ ಶ್ರೀ ಅಶೋಕ್ ರವರು ನೀಡಿರುವ ದೂರಿನ ಮನವಿಗಳನ್ನು ಸಹ ಪರಿಶೀಲಿಸಿ, ಶ್ರೀ ಅಶೋಕ್ ರವರು ಸಂಘದ ಸದಸ್ಯರೇ ಅಥವಾ ಅಲ್ಲವೇ ಎಂಬುದರ ಬಗ್ಗೆ ತಮ್ಮ ಅಭಿಪ್ರಾಯವನ್ನು ನೀಡುವಂತೆ ಸಹಕಾರ ಸಂಘಗಳ ನಿಬಂಧಕರು ರವರನ್ನು ಕೋರಿ ದಿನಾಂಕ: 30-01-2010 ರಂದು ಪತ್ರ ಬರೆಯಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಪತ್ರದಲ್ಲಿ, ಸಂಘವು ಕಾಯ್ದೆ ಕಲಂ 13 ಮತ್ತು ಬೈಲಾಗಳನ್ನು ಉಲ್ಲಂಘನೆ ಮಾಡಿದ್ದು, ವಿಚಾರಣಾಧಿಕಾರಿಗಳ ವರದಿಯಂತೆ, ಸಮಿತಿಯ ಅನುಮೋದನೆ ಇಲ್ಲದೇ ಸಂಘದ ಕಾರ್ಯದರ್ಶಿಯವರು ಕೆಲವು ಸದಸ್ಯರನ್ನು ತೆಗೆದುಕೊಂಡಿದ್ದು, ಸಂಘದ ದಾಖಲೆಗಳು ಮತ್ತು ವ್ಯವಹಾರಗಳು ಸಂಘ-ಸಂಸ್ಥೆಗಳ ಜಿಲ್ಲಾನೋಂದಣಾಧಿಕಾರಿಗಳ ವ್ಯಾಪ್ತಿಯಿಂದ ಹೊರಗಿರುತ್ತದೆ ಮತ್ತು ಸಂಘವು ಯಾವುದೇ ಕಾನೂನಿನ ಉಲ್ಲಂಘನೆ ಮಾಡಿರುವುದಿಲ್ಲ ಹಾಗೂ ಬೈಲಾಗಳನ್ನು ಪಾಲಿಸಿಕೊಂಡು ಬಂದಿದೆ ಎಂಬ ಬಗ್ಗೆ ಯಾವುದೇ ನಂಬಲಾರ್ಹವಾದ ದಾಖಲೆಗಳನ್ನಾಗಲೀ ಅಥವಾ ಸದಸ್ಯರ ಪಟ್ಟಿಯನ್ನಾಗಲೀ ಪುಷ್ಟೀಕರಿಸಲು ಕೊಟ್ಟಿರುವುದಿಲ್ಲ ಮತ್ತು ಕೆಲವು ಸದಸ್ಯರ ಹೆಸರುಗಳನ್ನು ವಾರ್ಷಿಕ ಸದಸ್ಯತ್ವ ಶುಲ್ಕ ನೀಡಿ ಸಂಘದ ಸದಸ್ಯತ್ವ ಉಳಿಸಿಕೊಳ್ಳದೆ ಇದ್ದುದರಿಂದ, ಸದಸ್ಯತ್ವದ ಪಟ್ಟಿಯಿಂದ ಅವರ ಹೆಸರುಗಳನ್ನು ತೆಗೆದುಹಾಕಿರುತ್ತಾರೆ ಮತ್ತು ಸಂಘಕ್ಕೆ ಆಡಳಿತಾಧಿಕಾರಿಗಳನ್ನು ನೇಮಕ ಮಾಡಿದಲ್ಲಿ ಸಮಿತಿಯ ಅವಧಿಯಲ್ಲಿ ಆಗಿರುವ ಲೋಪದೋಷಗಳ ಬಗ್ಗೆ ಕ್ರಮ ತೆಗೆದುಕೊಳ್ಳಲು ಅವಕಾಶವಾಗುವುದರಿಂದ, ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (5) ರ ಸರ್ಕಾರದ ದಿನಾಂಕ: 26-03-2010 ರ ಪತ್ರದಲ್ಲಿ ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯ ಬಗ್ಗೆ ಸ್ಪಷ್ಟ ಅಭಿಪ್ರಾಯ ನೀಡುವಂತೆ ಕೋರಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರಿಗೆ ಪತ್ರ ಬರೆಯಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (6) ರ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರದಲ್ಲಿ, ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಿದಲ್ಲಿ, ಸದರಿ ಕಾರ್ಯಕಾರಿ ಸಮಿತಿಯ ಅವಧಿಯಲ್ಲಿ ಆಗಿರುವ ಲೋಪದೋಷಗಳ ಬಗ್ಗೆ ಕ್ರಮ ತೆಗೆದುಕೊಳ್ಳಲು ಅವಕಾಶವಾಗುತ್ತದೆ ಹಾಗೂ ಎಲ್ಲಾ ಸದಸ್ಯರ ಹಿತದೃಷ್ಟಿಯಿಂದ ಆಡಳಿತಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ಇವರು ಅಭಿಪ್ರಾಯ ಪಟ್ಟಿರುವುದನ್ನು ಪರಿಗಣಿಸಿ, ಸಂಸ್ಥೆಯ ಸದಸ್ಯರ ಹಿತದೃಷ್ಟಿಯಿಂದ ಸದರಿ ಸಂಸ್ಥೆಗೆ ಕಾಯ್ದೆ 1960ರ ಕಲಂ 27ರನ್ವಯ ಆಡಳಿತಾಧಿಕಾರಿಯನ್ನು ನೇಮಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಎಲ್ಲ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 165 ಸಸಂನೋ 2009 ಬೆಂಗಳೂರು, ದಿನಾಂಕ : 23ನೇ ಏಪ್ರಿಲ್ 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸ್ಮಾರ್ಟ್ ಕಾರ್ಡ್ ಫೋರಂ ಆಫ್ ಇಂಡಿಯಾ, ಇಂದಿರಾನಗರ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಸಿ. ನಾಗರಾಜಯ್ಯ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಪ್ರಧಾನ ವ್ಯವಸ್ಥಾಪಕರು (ಆಡಳಿತ), ಬೆಂಗಳೂರು, ಸಹಕಾರಿ ಹಾಲು ಒಕ್ಕೂಟ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಪಿ.ಆರ್.1083 ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2010-11ನೇ ಸಾಲಿಗೆ ಕೇಂದ್ರ ಸರ್ಕಾರದ ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮವನ್ನು ಮುಂದುವರಿಸುವ ಬಗ್ಗೆ.

**ಉಲ್ಲೇಖ :**
1) ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿಪಿ 11 ಐಆರ್‌ಎಂ 82 ದಿನಾಂಕ: 14-05-1982.
2) ಸರ್ಕಾರಿ ಆದೇಶ ಸಂಖ್ಯೆ: ಅರ್‌ಡಿಪಿ 66 ಬಿಜಿಎಸ್ 84 ದಿನಾಂಕ: 12-06-1987.
3) ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 14 ಜೈಅಯೋ 2005 ದಿನಾಂಕ: 15-07-2005.
4) ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 9 ಜೈಅಯೋ 2006 ದಿನಾಂಕ: 01-04-2006.
5) ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 8 ಜೈಅಯೋ 2007 ದಿನಾಂಕ: 02-05-2007.
6) ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 2 ಜೈಅಯೋ 2008 ದಿನಾಂಕ: 23-04-2008.
7) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಜೈಅಯೋ 2009 ದಿನಾಂಕ: 16-04-2009.

**ಪ್ರಸ್ತಾವನೆ :**

ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದಂತೆ ರಾಜ್ಯ ಮಟ್ಟದಲ್ಲಿದ್ದ ಎರಡು ಕಾರ್ಯಕ್ರಮಗಳು ಮತ್ತು ಜಿಲ್ಲಾ ವಲಯದಡಿಯಲ್ಲಿದ್ದ ಒಂದು ಕಾರ್ಯಕ್ರಮವನ್ನು 2010–11ನೇ ಸಾಲಿಗೆ ಮುಂದುವರಿಸಲು ಸರ್ಕಾರ ತೀರ್ಮಾನಿಸಿದೆ. ಪ್ರಯುಕ್ತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 5 ಜೈಅಯೋ 2010 ಬೆಂಗಳೂರು, ದಿನಾಂಕ : 20ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮವನ್ನು ಮತ್ತು ಅನುಬಂಧ (1)ರಲ್ಲಿ ತಿಳಿಸಿರುವ ಸಿಬ್ಬಂದಿಯನ್ನು (ರಾಜ್ಯ ಕೋಶ) 2010–11ನೇ ಸಾಲಿಗೆ ಮುಂದುವರಿಸಿದೆ. ಯೋಜನೆಯ ಅನುಷ್ಠಾನವನ್ನು ಕಾಲಕಾಲಕ್ಕೆ ನೀಡಲಾದ ಆಡಳಿತಾತ್ಮಕ ಮಂಜೂರಾತಿಯಲ್ಲಿನ ಷರತ್ತು ಮತ್ತು ನಿಬಂಧನೆಗಳಂತೆ ನಿರ್ವಹಿಸತಕ್ಕದ್ದು.

ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮದಡಿ 2010–11ನೇ ಸಾಲಿನ ಆಯವ್ಯಯದಲ್ಲಿ ಕಾರ್ಯಕ್ರಮದ ಅನುಷ್ಟಾನಕ್ಕೆ ಜಿಲ್ಲಾ ವಲಯದಡಿ ಲೆಕ್ಕ ಶೀರ್ಷಿಕೆ 2810–60—198–6–01 ರಡಿ (ಲಿಂಕ್ ಕೋಡ್ 2810–01–101–0–00) ಕೇಂದ್ರ ಪಾಲಿನ ಅಡಿ ರೂ. 1097.31 ಲಕ್ಷಗಳು ಮತ್ತು ರಾಜ್ಯ ಪಾಲಿನಡಿ ರೂ. 365.77 ಲಕ್ಷ ಹಾಗೂ ರಾಜ್ಯ ವಲಯದಡಿ ಅನಿಲ ಯೋಜನೆಗೆ (ರಾಜ್ಯ ಸಹಾಯಧನ) ರೂ. 120.00 ಲಕ್ಷಗಳನ್ನು ಒದಗಿಸಲಾಗಿದೆ. ಅಲ್ಲದೇ ಸಿಬ್ಬಂದಿ ಹಾಗೂ ಆಡಳಿತಾತ್ಮಕ ವೆಚ್ಚಗಳಿಗಾಗಿ ಲೆಕ್ಕ ಶೀರ್ಷಿಕೆ 2810–01–001–0–02 ಯಡಿ ರೂ 35.00 ಲಕ್ಷಗಳನ್ನು ಒದಗಿಸಿದೆ.

ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರು, ರವರ ಸಹಮತಿಯನ್ನು ಅವರ ಟಿಪ್ಪಣಿ ಸಂಖ್ಯೆ ಗ್ರಾಅಪ 97 ಪಿಬಿಎಸ್ 2010, ದಿನಾಂಕ 15–04–2010 ರಲ್ಲಿ ಪಡೆದು ಹೊರಡಿಸಲಾಗಿದೆ.

ಪಿ.ಆರ್.1084

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಗ್ರಾಮೂಸೌ) ಹಾಗೂ

ಪದನಿಮಿತ್ತ ಸರ್ಕಾರದ ಜಂಟೀ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಅನುಬಂಧ–I

**ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 5 ಜೈಅಯೋ 2010 ಬೆಂಗಳೂರು, ದಿನಾಂಕ : 20ನೇ ಏಪ್ರಿಲ್ 2010**

2010–11ನೇ ಸಾಲಿಗೆ ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮದಡಿ ಮುಂದುವರಿಸಲಾದ ಹುದ್ದೆಗಳ ವಿವರ

| ಕ್ರ.ಸಂ. | ಮುಂದುವರಿಸಲಾದ ಹುದ್ದೆಗಳು | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| {ಎ: ರಾಜ್ಯ ಕೋಶ (ಕೇಂದ್ರ ಘಟಕ ಸಿಬ್ಬಂದಿ} | | | |
| 1 | ಉಪನಿರ್ದೇಶಕರು (ತಾಂತ್ರಿಕ) | 14050–25050 | ಒಂದು |
| 2 | ಉಪನಿರ್ದೇಶಕರು (ಜೈವಾನಿಲ) | 11400–21600 | ಒಂದು |
| 3 | ಲೆಕ್ಕ ಅಧೀಕ್ಷಕರು | 10800–20025 | ಒಂದು |
| 4 | ಶೀಘ್ರಲಿಪಿಗಾರರು | 7275–13350 ವಿ.ಭ.110/– | ಒಂದು |
| 5 | ಪ್ರಥಮ ದರ್ಜೆ ಸಹಾಯಕರು | 7275–13350 | ಒಂದು |
| 6 | ಬೆರಳಚ್ಚುಗಾರರು | 5800–10500 ವಿ.ಭ.90/– | ಒಂದು |
| 7 | ವಾಹನ ಚಾಲಕರು | 5800–10500 ವಿ.ಭ.90/– | ಒಂದು |
| 8 | ಗ್ರೂಪ್ ಡಿ ನೌಕರರು | 4800–7275 | ಒಂದು |

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಗ್ರಾಮೂಸೌ) ಹಾಗೂ

ಪದನಿಮಿತ್ತ ಸರ್ಕಾರದ ಜಂಟೀ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2010-11ನೇ ಸಾಲಿಗೆ ಸೌರ ಬೆಳಕು ಯೋಜನೆಯನ್ನು ಮುಂದುವರಿಸುವ ಕುರಿತು.

**ಉಲ್ಲೇಖ :** ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 5 ಜೈಅಯೋ 2009 ದಿನಾಂಕ: 14-07-2009.

**ಪ್ರಸ್ತಾವನೆ :**

ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಸೌರ ಬೆಳಕು ಯೋಜನೆಯನ್ನು ಅನುಷ್ಠಾನಗೊಳಿಸಿ ಮುಂದುವರಿಸಲಾಗಿದೆ. ಪ್ರಸಕ್ತ ಸಾಲಿನಲ್ಲಿ ಸೌರ ಬೆಳಕು ಯೋಜನೆಗೆ ರಾಜ್ಯ ಆಯವ್ಯಯದಡಿ ಲೆಕ್ಕ ಶೀರ್ಷಿಕೆ 2810-80-800-0-02-059 ರಡಿ ರೂ.200.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ಈ ಹಿನ್ನಲೆಯಲ್ಲಿ ಸದರಿ ಯೋಜನೆಯನ್ನು 2010-11ನೇ ಸಾಲಿಗೆ ಮುಂದುವರಿಸಲು ಸರ್ಕಾರ ತೀರ್ಮಾನಿಸಿದೆ. ಪ್ರಯುಕ್ತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಗ್ರಾಇಂಕಾ 2010 ಬೆಂಗಳೂರು, ದಿನಾಂಕ : 20ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ, 2010-11ನೇ ಸಾಲಿಗೆ ಸೌರ ಬೆಳಕು ಯೋಜನೆಯನ್ನು ಮುಂದುವರಿಸಿದೆ. ಯೋಜನೆಯ ಅನುಷ್ಠಾನವನ್ನು ಕಾಲಕಾಲಕ್ಕೆ ನೀಡಲಾಗುವ ಆಡಳಿತಾತ್ಮಕ ಮಂಜೂರಾತಿಯನ್ವಯ ಅನುಷ್ಠಾನಗೊಳಿಸತಕ್ಕದ್ದು.

ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ ಗ್ರಾಅಪ 96 ಪಿಬಿಎಸ್ 2010 ದಿನಾಂಕ 15-04-2010 ರಲ್ಲಿ ಪಡೆದು ಹೊರಡಿಸಲಾಗಿದೆ.

ಪಿ.ಆರ್.1085

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಗ್ರಾಮೂಸೌ) ಹಾಗೂ

ಪದನಿಮಿತ್ತ ಸರ್ಕಾರದ ಜಂಟೀ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ರಾಯಚೂರು ಜಿಲ್ಲೆ, ರಾಯಚೂರು ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಡುವ ಕುರಿತು.

**ಓದಲಾಗಿದೆ :**

1. ದಿನಾಂಕ : 04-08-09ರ ನೋಟೀಸು ಸಂಖ್ಯೆ : ಸಿಆಸುಇ 013 ಕೆಇವಿ 07.
2. ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಉಪ ವಿಭಾಗಾಧಿಕಾರಿ, ಬೆಂಗಳೂರು ದಕ್ಷಿಣ ಉಪ ವಿಭಾಗ, ಬೆಂಗಳೂರು ಇವರ ದಿನಾಂಕ : 19-09-09ರ ಲಿಖಿತ ರಕ್ಷಣಾತ್ಮಕ ಹೇಳಿಕೆ.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನಲ್ಲಿ ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ರಾಯಚೂರು ಜಿಲ್ಲೆ, ರಾಯಚೂರು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕೆಲವು ಭೂ ಪರಿವರ್ತನೆ ಪ್ರಕರಣಗಳಿಗೆ ಸಂಬಂಧಿಸಿದಂತೆ ಎಸಗಿರುವ ಕರ್ತವ್ಯ ಲೋಪ ಹಾಗೂ ದುರ್ನಡತೆ ಕುರಿತಂತೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11ರಡಿ ದೋಷಾರೋಪಣ ಪಟ್ಟಿಯನ್ನು ಜಾರಿಗೊಳಿಸಿ ಶಿಸ್ತು ಕ್ರಮವನ್ನು ಪ್ರಾರಂಭಿಸಲಾಯಿತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ, ಶ್ರೀ ಬಿ.ಹೆಚ್. ಸಿದ್ದಪ್ಪರವರು ಲಿಖಿತ ರಕ್ಷಣಾತ್ಮಕ ಹೇಳಿಕೆ ಸಲ್ಲಿಸಿ, ತಮ್ಮ ಅನುಪಸ್ಥಿತಿಯಲ್ಲಿ ಕಛೇರಿ ಸಹಾಯಕರು ಕಡತಗಳನ್ನು ಜಿಲ್ಲಾಧಿಕಾರಿಗಳಿಗೆ ನೇರವಾಗಿ ಮಂಡಿಸಿರುವರೆಂದೂ, ಬಹುತೇಕ ಸಂದರ್ಭದಲ್ಲಿ ತಾವು ರಜೆಯ ಮೇಲಿದ್ದಾಗ ಅಥವಾ ಕಛೇರಿಯ ಇತರೇ ಕರ್ತವ್ಯದ ಮೇಲಿದ್ದಾಗ ಅಂದಿನ ಕಛೇರಿ ಸಹಾಯಕರು ಭೂ ಪರಿವರ್ತನಾ ಕಡತಗಳನ್ನು ಶಿಫಾರಸ್ಸು ಮಾಡಿ ನೇರವಾಗಿ ಜಿಲ್ಲಾಧಿಕಾರಿಗಳಿಗೆ ಮಂಡಿಸಿ ಆದೇಶ ಪಡೆದಿರುವರೆಂದೂ ಮತ್ತು ಜಿಲ್ಲಾಧಿಕಾರಿಗಳಿಂದ ಶಿಫಾರಸ್ಸುಗೊಂಡ ಕಡತಗಳು ಹಿಂದಿರುಗುವಾಗ ತಮ್ಮ ಬಳಿ ಬಂದಿರುವುದಿಲ್ಲವೆಂದೂ, ಸದರಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಅಂದಿನ ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ, ರಾಯಚೂರು ರವರಿಗೆ ಆಡಳಿತಾತ್ಮಕ ಎಚ್ಚರಿಕೆ ನೀಡುತ್ತಾ ಅವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಟ್ಟಿರುವುದರಿಂದಲೂ ಮತ್ತು ಇತರೇ ಆರೋಪಿಗಳಾದ ಅಂದಿನ ಕಛೇರಿ ಸಹಾಯಕರು ಮತ್ತು ಸಿಬ್ಬಂದಿಯವರನ್ನು ಆರೋಪಮುಕ್ತಗೊಳಿಸಿ ಕಂದಾಯ ಇಲಾಖೆಯು ಆದೇಶ ಹೊರಡಿಸಿರುವುದರಿಂದಲೂ ತನ್ನ ಸಮಜಾಯಷಿಯನ್ನು ಒಪ್ಪಿಕೊಂಡು ತನ್ನ ವಿರುದ್ಧದ ಶಿಸ್ತು ಕ್ರಮವನ್ನು

ಕೈಬಿಡುವಂತೆ ಮನವಿ ಮಾಡಿರುತ್ತಾರೆ. ಶ್ರೀ ಸಿದ್ದಪ್ಪ ಇವರ ರಕ್ಷಣಾತ್ಮಕ ಹೇಳಿಕೆಯಲ್ಲಿನ ಅಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಿ, ಸರ್ಕಾರವು, ಸದರಿಯವರು ಸಲ್ಲಿಸಿದ ರಕ್ಷಣಾತ್ಮಕ ಹೇಳಿಕೆಯನ್ನು ಅಂಗೀಕರಿಸುತ್ತಾ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 013 ಕೆಇವಿ 07, ಬೆಂಗಳೂರು, ದಿನಾಂಕ : 26-04-2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ರಾಯಚೂರು ಜಿಲ್ಲೆ, ರಾಯಚೂರು (ಪ್ರಸ್ತುತ ಉಪ ವಿಭಾಗಾಧಿಕಾರಿ, ಬೆಂಗಳೂರು ದಕ್ಷಿಣ ಉಪ ವಿಭಾಗ, ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ) ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11 ರಡಿ ದೋಷಾರೋಪಣ ಪಟ್ಟಿಯೊಂದಿಗೆ ದಿನಾಂಕ : 04-08-09ರಂದು ಜಾರಿಗೊಳಿಸಿದ ನೋಟೀಸಿಗೆ ಇವರು ದಿನಾಂಕ : 19-09-09 ರಂದು ಸಲ್ಲಿಸಿದ ಲಿಖಿತ ರಕ್ಷಣಾತ್ಮಕ ಹೇಳಿಕೆಯನ್ನು ಅಂಗೀಕರಿಸಿ, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಣಯಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1175

**ಹೆಚ್. ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು-2)

**ಸಹಕಾರ ಸಚಿವಾಲಯ**

**ವಿಷಯ :** ಜಿ. ಕೆಬ್ಬಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಂಡ್ಯ ಇದರ ವಿಶೇಷಾಧಿಕಾರಿಯವರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರ ಸಂಖ್ಯೆ : ಡೈರಿ/ಡಿಎವೈ-1/161/2009-10, ದಿನಾಂಕ : 20-02-2010.

**ಪ್ರಸ್ತಾವನೆ:-**

ಜಿ. ಕೆಬ್ಬಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಂಡ್ಯ ಇದರ ಆಡಳಿತ ಮಂಡಳಿಯನ್ನು ದಿನಾಂಕ: 30-04-2008ರಂದು ರದ್ದುಪಡಿಸಿ ಮಾರ್ಗ ವಿಸ್ತರಣಾಧಿಕಾರಿ ಮನ್‌ಮಲ್, ಗೆಜ್ಜಲಗೆರೆ, ಮದ್ದೂರು ತಾಲ್ಲೂಕು ಇವರನ್ನು ವಿಶೇಷಾಧಿಕಾರಿಯನ್ನಾಗಿ ದಿನಾಂಕ : 30-04-2008ರಂದು ನೇಮಿಸಿದ್ದು, ತದನಂತರ ಹಂತ ಹಂತವಾಗಿ ಸದರಿ ಅಧಿಕಾರಿಯವರ ಅವಧಿಯನ್ನು ದಿನಾಂಕ : 30-04-2008 ರಿಂದ 29-10-2009 (ಒಂದೂವರೆ ವರ್ಷಕ್ಕೆ) ಮಂಡ್ಯ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ವಿಸ್ತರಿಸಿ ಆದೇಶಿಸಿರುತ್ತಾರೆ.

ಸದರಿ ಗ್ರಾಮದಲ್ಲಿ ರಾಜಕೀಯ ವೈಷಮ್ಯದಿಂದಾಗಿ, ಅಶಾಂತಿ ವಾತಾವರಣವಿರುವ ಹಿನ್ನೆಲೆಯಲ್ಲಿ, ಸದರಿ ಸಂಘದ ಚುನಾವಣೆಯನ್ನು ನಡೆಸಿ, ನೂತನ ಆಡಳಿತ ಮಂಡಳಿ ರಚನೆ ಮಾಡಲು ಸಾಧ್ಯವಾಗದೇ ಇರುವುದರಿಂದ, ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ : 30-10-2009 ರಿಂದ ಇನ್ನೂ ಆರು ತಿಂಗಳ ಕಾಲ ವಿಸ್ತರಿಸಿ ಕೊಡುವಂತೆ ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಅಪರ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 57 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ : 22ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಜಿ. ಕೆಬ್ಬಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಂಡ್ಯ ಇದರ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ : 30-10-2009 ರಿಂದ 29-04-2010ರ ವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಜಿ. ಕೆಬ್ಬಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಂಡ್ಯ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ :-

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31 ಉಪಪ್ರಕರಣ (1)ರಲ್ಲಿನ **"ಒಂದು ವರ್ಷ"** ಎಂಬ ಪದಗಳಿಗೆ ಬದಲಾಗಿ **"ಇಪ್ಪತ್ತನಾಲ್ಕು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ :** 2) ಪ್ರಕರಣ 31 ಉಪ-ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 29-04-2010ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31 ಉಪ-ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1176

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿನ ಪಿಪಿಪಿ ಕೋಶದಲ್ಲಿನ ಸಹಾಯಕ ನಿರ್ದೇಶಕರ ಒಂದು ಹುದ್ದೆಯನ್ನು ಗ್ರೂಪ್-ಎ ಯಿಂದ ಗ್ರೂಪ್-ಬಿ ಗೆ ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 15 ಸಸಿವಿ 96, ದಿನಾಂಕ 20-03-2002.
2) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 496 ಸಆಸೇ 2009, ದಿನಾಂಕ : 31-12-2009.
3) ಕಡತ ಸಂಖ್ಯೆ ಸಿಆಸುಇ 301 ಸಿಶಾಸೇ 2009.

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ದಿನಾಂಕ 20-03-2002ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಇತರ ಹುದ್ದೆಗಳೊಡನೆ ಪಿಪಿಪಿ ಕೋಶದಲ್ಲಿ ವೇತನ ಶ್ರೇಣಿ 7400-13120ರಲ್ಲಿನ ಸಹಾಯಕ ನಿರ್ದೇಶಕರ ಎರಡು ಹುದ್ದೆಗಳನ್ನು ಗ್ರೂಪ್-ಎ ನಲ್ಲಿ ಸೃಜಿಸಲಾಗಿತ್ತು. ಆನಂತರ ಸದರಿ ಹುದ್ದೆಯನ್ನು ಮುಂದುವರೆಸಿ ಅಂತಿಮವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ 31-12-2009ರ ಆದೇಶದಲ್ಲಿ ದಿನಾಂಕ 21-09-2009ರಿಂದ ಒಂದು ವರ್ಷದವರೆಗೆ ಮುಂದುವರೆಸಲಾಗಿದೆ. ಸಿ.ಆ.ಸು.ಇ. (ಆಡಳಿತ) ವಿಭಾಗವು ಮೇಲೆ (3)ರಲ್ಲಿ ಓದಲಾದ ಕಡತವನ್ನು ದಿನಾಂಕ 02-03-2010ರಂದು ಕಳುಹಿಸಿ ಎರಡು ಸಹಾಯಕ ನಿರ್ದೇಶಕರ ಹುದ್ದೆಗಳ ಪೈಕಿ ಒಂದನ್ನು ಗ್ರೂಪ್-ಬಿ ಗೆ ನಿಮ್ನೀಕರಿಸುವಂತೆ ಕೋರಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 149 ಸಅಸೇ 2010, ಬೆಂಗಳೂರು, ದಿನಾಂಕ : 27ನೇ ಮಾರ್ಚ್ 2010**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಇತರೆ ಹುದ್ದೆಗಳೊಡನೆ ಪಿಪಿಪಿ ಕೋಶದಲ್ಲಿ ವೇತನ ಶ್ರೇಣಿ 7400-13120ರಲ್ಲಿನ ಸಹಾಯಕ ನಿರ್ದೇಶಕರ ಎರಡು ಹುದ್ದೆಗಳ ಪೈಕಿ ಒಂದನ್ನು ಗ್ರೂಪ್-ಬಿ ಹುದ್ದೆ ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿಮ್ನೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1177

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು-3)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**
**ತಿದ್ದುಪಡಿ ಆದೇಶ**

**ಸಂಖ್ಯೆ : ಸಿಐ 565 ಎಸ್‌ಪಿಕ್ಯೂ 2009, ಬೆಂಗಳೂರು, ದಿನಾಂಕ : 28–04–2010**

ಸರ್ಕಾರದ ಆದೇಶ ಸಂಖ್ಯೆ : ಸಿಐ 286 ಎಸ್‌ಪಿಕ್ಯೂ 2009 ದಿನಾಂಕ : 16–11–2009ರಲ್ಲಿನ ಆದೇಶ ಭಾಗದ ತಃಖ್ತೆಯಲ್ಲಿನ ಕ್ರಮ ಸಂಖ್ಯೆ : 6ರಲ್ಲಿ ಸಹಾಯಕ ಕಾರ್ಯದರ್ಶಿ ದರ್ಜೆಯ 7 ಹುದ್ದೆಗಳನ್ನು ಪದೋನ್ನತಿಯ ಮೂಲಕ ಭರ್ತಿ ಮಾಡಬೇಕು ಎಂಬುದರ ಬದಲಾಗಿ ಸಹಾಯಕ ಕಾರ್ಯದರ್ಶಿ ದರ್ಜೆಯ 4 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಹಾಗೂ 3 ಹುದ್ದೆಗಳನ್ನು ಪದೋನ್ನತಿಯ ಮೂಲಕ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1178

**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ(ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**COMMERCE AND INDUSTRIES SECRETARIAT**

**Sub :** Approval to the project proposal of M/s Easun Reyrolle Ltd., to establish a unit for manufacture of Medium Voltage Switchgears, Accessories and Components – 50000 Nos, at Harohalli Industrial Area, Kanakapura Taluk, Ramanagara District.

**Read :** Proceedings of the 21$^{st}$ State High Level Clearance Committee (SHLCC) meeting held on 29-03-2010.

**Preamble :-**

M/s Easun Reyrolle Ltd., proposes to establish a unit for manufacture of Medium Voltage Switchgears, Accessories and Components – 50000 Nos, at Harohalli Industrial Area, Kanakapura Taluk, Ramanagara District, with an investment of Rs. 175.73 crores, generating employment to about 277 persons.

In the 21$^{st}$ State High Level Clearance Committee (SHLCC) meeting held on 29-03-2010, the proposal of the Company has been approved.

Government has examined the recommendations made by the State High Level Clearance Committee in the 21$^{st}$ meeting held on 29-03-2010, in all aspects.

Hence the following order.

**Government Order No. CI 130 SPI 2010, Bangalore, Dated : 24-04-2010**

Government is pleased to accord in principle approval to the project proposal of M/s Easun Reyrolle Ltd., to establish a unit for manufacture of Medium Voltage Switchgears, Accessories and Components – 50000 Nos, at Harohalli Industrial Area, Kanakapura Taluk, Ramanagara District, with an investment of Rs. 175.73 crores, generating employment to about 277 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** 16 acres of land, in Plot No. 147, II Phase, Harohalli Industrial Area, Kanakapura Taluk, Ramanagara District.
2. **Power :** 1250 KVA to be serviced by BESCOM.
3. **Water :** 50 KLD from KIADB.
4. **Incentives and Concessions :** As applicable under New Industrial Policy 2009-14.

**GENERAL TERMS AND CONDITIONS :**

1. **MOU :** The project proponents will have to sign a MOU with the Government of Karnataka during the Global Investors Meet in June 2010.

2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructrure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**Aparna Pavate**

PR NO. 1179

Desk Officer (Technical Cell)

Commerce and Industries Department

**COMMERCE AND INDUSTRIES SECRETARIAT**

**Sub :** Approval to the Project Proposal of M/s Just Dial Pvt. Ltd., to establish an "IT/ITES – BPO & Software Development Centre" at IT/ITES Industrial Area, Devanahalli Taluk, Bangalore Rural District.

**Read :** Proceedings of the 21st State High Level Clearance Committee (SHLCC) meeting held on 29-03-2010.

**Preamble :-**

M/s Just Dial Pvt. Ltd., proposes to establish an "IT/ITES – BPO & Software Development Centre" at IT/ITES Industrial Area, Devanahalli Taluk, Bangalore Rural District, with an investment of Rs. 445.08 crores, generating employment to about 20991 persons.

In the 21st State High Level Clearance Committee (SHLCC) meeting held on 29-03-2010, the proposal of the Company has been approved.

Government has examined the recommendations made by the State High Level Clearance Committee in the 21st meeting held on 29-03-2010, in all aspects.

Hence the following order.

**Government Order No. CI 129 SPI 2010, Bangalore, Dated : 24-04-2010**

Government is pleased to accord in principle approval to the project proposal of M/s Just Dial Pvt. Ltd., to establish an "IT/ITES – BPO & Software Development Centre" at IT/ITES Industrial Area, Devanahalli Taluk, Bangalore Rural District, with an investment of Rs. 445.08 crores, generating

employment to about 20991 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** 15 acres – at KIADB IT/ITES Industrial Area, Devanahalli Taluk, Bangalore Rural District,
2. **Power :** 8000 KVA to be serviced by BESCOM.
3. **Water :** 0.15 MLD to be supplied by KIADB.
4. **Incentives and Concessions :** As per prevailing IT/BPO Policy of the State.

**GENERAL TERMS AND CONDITIONS :**

1. **MOU :** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with provisions of IT/BPO Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructrure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**Aparna Pavate**

PR NO. 1180

Desk Officer (Technical Cell)

Commerce and Industries Department

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಕಡೂರಿನಲ್ಲಿ ಸರ್ಕಾರಿ ರೇಷ್ಮೆ ನೂಲುಬಿಚ್ಚುವ ಕಿರುಘಟಕದ ಕಟ್ಟಡ ಹಾಗೂ ಖಾಲಿ ನಿವೇಶನವನ್ನು ಜಿ.ಟಿ.ಟಿ.ಸಿ. ಸಂಸ್ಥೆಗೆ ನೀಡುವ ಬಗ್ಗೆ.

**ಓದಲಾಗಿದೆ :**

1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ : ರೇಉಕೋ/ತಾಂ1/ರೇನೂಸಂ/ಕಡೂರು/ಬಾಡಿಗೆ/6/2006–07, ದಿ : 01–01–2009 ಮತ್ತು 16–11–2009.
2. ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರ, ಇವರ ದಿನಾಂಕ : 16–11–2009ರ ಪತ್ರ.
3. ಸರ್ಕಾರಿ ಆದೇಶ ಸಂಖ್ಯೆ : ವಾಕೈ 28 ರೇಯೋವಿ 2006, ದಿ : 07–12–2006.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಕಡೂರಿನಲ್ಲಿರುವ ರೇಷ್ಮೆ ಇಲಾಖೆಯ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಕಟ್ಟಡವನ್ನು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಲೋಕೋಪಯೋಗಿ ಇಲಾಖೆ

ನಿಗದಿಪಡಿಸಿರುವ ದರದನ್ವಯ ಬಾಡಿಗೆ ಆಧಾರದ ಮೇಲೆ ನೀಡುವುದಕ್ಕೆ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು. ಅದರಂತೆ ರೇಷ್ಮೆ ಇಲಾಖೆಯು ಸಂಕೀರ್ಣದ ಕಟ್ಟಡವನ್ನು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಮಾಹೆಯಾನ ರೂ. 14,500/– ಬಾಡಿಗೆ ಆಧಾರದ ಮೇಲೆ ನೀಡಿದೆ. ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರ ಇವರು ಸದರಿ ಕಟ್ಟಡದಲ್ಲಿ ಡಿಪ್ಲಮೋ ಇನ್ ಟೂಲ್ ಅಂಡ್ ಡೈಮೇಕಿಂಗ್ ಕೋರ್ಸ್‌ನ್ನು ನಡೆಸುತ್ತಿದ್ದು, ಖಾಲಿ ನಿವೇಶನದಲ್ಲಿ ಕೆಲವು ಶೆಡ್‌ಗಳನ್ನು ನಿರ್ಮಿಸಿ ತರಬೇತಿ ನೀಡುವುದಕ್ಕಾಗಿ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಶೆಡ್ ಕಟ್ಟಡ ಹಾಗೂ ಖಾಲಿ ಜಾಗವನ್ನು ತಮ್ಮ ಸಂಸ್ಥೆಗೆ ವರ್ಗಾಯಿಸುವಂತೆ ಕೋರಿರುವುದಾಗಿ ತಿಳಿಸಿ, ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಅವಶ್ಯಕತೆ ರೇಷ್ಮೆ ಇಲಾಖೆಗೆ ಇಲ್ಲದಿರುವುದರಿಂದ ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಸಂಸ್ಥೆಗೆ ಕಟ್ಟಡವನ್ನು ಕೆಲವು ಷರತ್ತು ಹಾಗೂ ನಿಬಂಧನೆಗಳಂತೆ ಹಸ್ತಾಂತರಿಸುವುದಕ್ಕೆ ಅನುಮತಿ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರಗಳಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ದಿ : 28–09–2009ರಂದು ನಡೆದ ಕಡೂರು ಪುರಸಭೆಯ ವಿಶೇಷ ಸಭೆಯಲ್ಲಿ ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಉಪಕೇಂದ್ರ ಸ್ಥಾಪಿಸಲು ಮಲ್ಲಪ್ಪನಹಳ್ಳಿ ಗ್ರಾಮದ ಸರ್ವೆ ನಂ. 41 ರಲ್ಲಿ ರೇಷ್ಮೆ ಇಲಾಖೆಯ ನೂಲು ಬಿಚ್ಚುವ ಘಟಕದ ಪ್ರದೇಶಕ್ಕೆ ಹೊಂದಿಕೊಂಡಂತೆ ಖಾಲಿ ಇರುವ 4 ಎಕರೆ ಜಾಗವನ್ನು ಉಚಿತವಾಗಿ ನೀಡುವ ಬಗ್ಗೆ ತೀರ್ಮಾನಿಸಲಾಗಿರುವ ಬಗ್ಗೆ ಹಾಗೂ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರಿ ರೇಷ್ಮೆ ನೂಲುಬಿಚ್ಚುವ ಕಿರುಘಟಕ ಹಾಗೂ ಖಾಲಿ ನಿವೇಶನವನ್ನು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಹಸ್ತಾಂತರಿಸಲು ಸರ್ಕಾರವನ್ನು ಕೋರಿರುವುದರ ಬಗ್ಗೆ ತಿಳಿಸಿ, ಸದರಿ ಘಟಕ ಹಾಗೂ ನಿವೇಶನವನ್ನು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಹಸ್ತಾಂತರಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರ ಇವರು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿದ್ದಂತೆ ಕಡೂರಿನಲ್ಲಿರುವ ರೇಷ್ಮೆ ನೂಲುಬಿಚ್ಚುವ ಸಂಕೀರ್ಣದ ರೀಲಿಂಗ್ ಶೆಡ್ ಹಾಗೂ ಖಾಲಿ ನಿವೇಶನವನ್ನು ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರದ ಸಂಸ್ಥೆಗೆ ಹಸ್ತಾಂತರಿಸುವುದಕ್ಕೆ ಕಂದಾಯ ಇಲಾಖೆಯ ಸಹಮತಿಯನ್ನು ಕೋರಲಾಗಿತ್ತು.

ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಸಂಸ್ಥೆಯು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಸ್ವಾಮ್ಯದ ಸಂಸ್ಥೆಯಾಗಿದ್ದು, ಅದು ನಡೆಸುತ್ತಿರುವ ಡಿಪ್ಲಮೋ ಇನ್ ಟೂಲ್ ಅಂಡ್ ಡೈಮೇಕಿಂಗ್ ಕೋರ್ಸ್‌ನ್ನು ನಡೆಸಲು ಶೆಡ್‌ಗಳನ್ನು ನಿರ್ಮಿಸಿ ತರಬೇತಿ ನೀಡಬೇಕಾಗಿರುವುದರಿಂದ ಸಂಕೀರ್ಣದ ಶೆಡ್ ಕಟ್ಟಡ ಹಾಗೂ ಖಾಲಿ ಜಾಗವನ್ನು ನೀಡುವಂತೆ ಕೋರಿರುವುದರಿಂದ ಹಾಗೂ ಸದರಿ ಜಮೀನು ಹಾಗೂ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಅವಶ್ಯಕತೆ ರೇಷ್ಮೆ ಇಲಾಖೆಗೆ ಇರುವುದಿಲ್ಲವೆಂದು ರೇಷ್ಮೆ ಆಯುಕ್ತರು ತಿಳಿಸಿರುವುದರಿಂದ ವಿಷಯವನ್ನು ಪರಿಶೀಲಿಸಲಾಗಿದ್ದು, ಪ್ರಸ್ತಾವಿತ ಜಮೀನನ್ನು ರೇಷ್ಮೆ ಇಲಾಖೆಯು ಪುರಸಭಾ ಕಾರ್ಯಾಲಯ ಕಡೂರು ಇವರಿಂದ ರೂ. 25,000/– ನ್ನು ಪಾವತಿಸಿ ಪಡೆದಿರುತ್ತದೆಯಾದ್ದರಿಂದ ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಕಟ್ಟಡ ಹಾಗೂ ಖಾಲಿ ನಿವೇಶನವನ್ನು ರೇಷ್ಮೆ ಇಲಾಖೆಯು ನಿಗದಿಪಡಿಸಬಹುದಾದ ದರವನ್ನು ಪಾವತಿಸುವ ಷರತ್ತಿನ ಮೇರೆಗೆ ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಹಸ್ತಾಂತರಿಸುವುದಕ್ಕೆ ಅನುಮತಿ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 6 ರೇಯೋವಿ 2009, ಬೆಂಗಳೂರು, ದಿನಾಂಕ : 23–04–2010**

ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರವು ಕಡೂರಿನಲ್ಲಿ 2 ವರ್ಷಗಳಿಂದ ನಡೆಸುತ್ತಿರುವ ಡಿಪ್ಲಮೋ ಇನ್ ಟೂಲ್ ಅಂಡ್ ಡೈಮೇಕಿಂಗ್ ಕೋರ್ಸ್‌ನ್ನು ಸಮರ್ಪಕ ರೀತಿಯಲ್ಲಿ ನಡೆಸುವುದಕ್ಕಾಗಿ ಶೆಡ್‌ಗಳನ್ನು ನಿರ್ಮಿಸಿ ತರಬೇತಿ ನೀಡಲು ಅನುಕೂಲವಾಗುವಂತೆ ರೇಷ್ಮೆ ಇಲಾಖೆಯು ಕಡೂರಿನಲ್ಲಿ ಹೊಂದಿರುವ ಸರ್ಕಾರಿ ರೇಷ್ಮೆ ನೂಲು ಬಿಚ್ಚುವ ಕಿರು ಘಟಕದ ಸಂಕೀರ್ಣ ಹಾಗೂ ಖಾಲಿ ನಿವೇಶನವನ್ನು ರೇಷ್ಮೆ ಇಲಾಖೆಯು ನಿಗದಿಪಡಿಸಬಹುದಾದ ದರವನ್ನು ಪಾವತಿಸುವ ಷರತ್ತಿನ ಮೇರೆಗೆ ಸರ್ಕಾರಿ ಉಪಕರಣಗಾರ ಮತ್ತು ತರಬೇತಿ ಕೇಂದ್ರಕ್ಕೆ ಹಸ್ತಾಂತರಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1181

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ರಾಧಾ ಮೋಹನ್ ಪಾಂಡೆ, ಪ್ರ.ದ.ಸ. ಜಿಲ್ಲಾ ಪೊಲೀಸ್ ಕಚೇರಿ, ಗುಲ್ಬರ್ಗಾ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**

1. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರ ಪತ್ರ ಸಂಖ್ಯೆ : ಅಪೀಲು (2)40/2008–09 ದಿನಾಂಕ : 13–10–2008.
2. ಪರಿಷ್ಕರಣ ಮೇಲ್ಮನವಿ ದಿನಾಂಕ : 30–06–2008.
3. ಐ.ಜಿ.ಪಿ., ಈಶಾನ್ಯ ವಲಯ, ಗುಲ್ಬರ್ಗಾ ರವರ ಆದೇಶ ಸಂಖ್ಯೆ : ಅಪೀಲು : 29 : ಈವ : 2008–1269 : ಅಪೀಲು ಸಂಖ್ಯೆ 227 : ಈವ 2008 ದಿನಾಂಕ : 08–04–2008.
4. ಕಾರ್ಯದರ್ಶಿಗಳು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಪತ್ರ ಸಂಖ್ಯೆ 43 ಸಿಎನ್‌ಎಸ್ 09 ದಿನಾಂಕ : 12–06–2009.

**ಪ್ರಸ್ತಾವನೆ :**

ಶ್ರೀ ಆರ್.ಎಂ. ಪಾಂಡೆ, ಪ್ರ.ದ.ಸ. ಪೊಲೀಸ್ ಅಧೀಕ್ಷಕರ ಕಛೇರಿ, ಗುಲ್ಬರ್ಗಾ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ನಿಯಂತ್ರಣ, ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 12ರ ಅಡಿಯಲ್ಲಿ ದಿನಾಂಕ : 13–11–2007 ರಂದು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ತೋರಿರುವ ಸಂಬಂಧದಲ್ಲಿ ದೋಷಾರೋಪಣೆ ಹೊರಿಸಿರುತ್ತಾರೆ.

ಅದರನ್ವಯ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಿ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿ ಆದೇಶವನ್ನು ಹೊರಡಿಸಲಾಗಿರುತ್ತದೆ. ಸದರಿ ಆದೇಶದ ವಿರುದ್ಧ ಶ್ರೀ ರಾಧಾ ಮೋಹನ್ ಪಾಂಡೆ, ಮೇಲ್ಮನವಿ ಸಲ್ಲಿಸಿದ್ದು, ಮೇಲ್ಮನವಿ ಪ್ರಾಧಿಕಾರವು ದಿನಾಂಕ : 08–04–2008 ರಂದು ಸದರಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲೆ ಉಲ್ಲೇಖಿಸಿರುವ ಎರಡು ಆದೇಶಗಳ ವಿರುದ್ಧ ಸರ್ಕಾರಕ್ಕೆ ಮೇಲೆ ಓದಲಾದ (2)ರಲ್ಲಿ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಲಾಗಿರುತ್ತದೆ. ಪರಿಷ್ಕರಣ ಮೇಲ್ಮನವಿಯ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ಶಿಸ್ತು ಪ್ರಾಧಿಕಾರಿಯು ಹೊರಡಿಸಿರುವ ದಂಡನಾ ಆದೇಶವನ್ನು ಭಾಗಶಃ ಪರಿಷ್ಕರಿಸಲು ನಿರ್ಣಯಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ (4)ರ ಪತ್ರದಲ್ಲಿ ಪಡೆಯಲಾಗಿರುತ್ತದೆ. ಅದರನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 103 ಪೊಸಿಲಿ 2008, ಬೆಂಗಳೂರು, ದಿನಾಂಕ : 29–04–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26(ಎ)ರ ಪ್ರಕಾರ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರಾಧಾ ಮೋಹನ್ ಪಾಂಡೆ, ಪ್ರ.ದ.ಸ. ಜಿಲ್ಲಾ ಪೊಲೀಸ್ ಕಛೇರಿ, ಗುಲ್ಬರ್ಗಾ ರವರಿಗೆ ಶಿಸ್ತು ಪ್ರಾಧಿಕಾರಿಗಳು ವಿಧಿಸಿದ್ದ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸುವ ಬದಲಾಗಿ ವೇತನ ಬಡ್ತಿಯನ್ನು 1 ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1182

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವತಿಯಿಂದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಸಹಯೋಗದೊಂದಿಗೆ ರಾಜ್ಯ ಸಂರಕ್ಷಿತ ಸ್ಮಾರಕಗಳ ನಿರ್ವಹಣೆ ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ಮಾರ್ಗದರ್ಶನ ನೀಡಲು ಉನ್ನತ ಮಟ್ಟದ ಸಮಿತಿ ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ ಸಂಕಇ 97 ಕೆಎಂಯು 2001, ದಿನಾಂಕ 18–01–2002

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ : ಡಿಎಎಂ/ಎಸಿಟಿ/6/207/2009–10, ದಿನಾಂಕ 20–03–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 18–01–2002ರ ಸರ್ಕಾರಿ ಆದೇಶದಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಸಹಯೋಗದೊಂದಿಗೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ರಾಜ್ಯ ಸಂರಕ್ಷಿತ ಸ್ಮಾರಕಗಳ ಸಂರಕ್ಷಣೆ, ನಿರ್ವಹಣೆ ಮತ್ತು ಅಭಿವೃದ್ಧಿಗೊಳಿಸಲು ಕಾರ್ಯಕ್ರಮಗಳ ಅನುಷ್ಠಾನದಲ್ಲಿ ನೇರ, ನಿರಂತರ, ದಕ್ಷ ನಿಯತಕಾಲಿಕ ಮಾರ್ಗದರ್ಶನ ನೀಡಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 20–03–2010ರ ಪತ್ರದಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಸಹಯೋಗದೊಂದಿಗೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಕೈಗೊಳ್ಳುವ ಪ್ರಾಚೀನ ಸ್ಮಾರಕಗಳ ಸಂರಕ್ಷಣೆ, ನಿರ್ವಹಣೆ ಮತ್ತು ಅಭಿವೃದ್ಧಿಗೊಳಿಸಲು ಕಾರ್ಯಕ್ರಮ ಕಾರ್ಯಗಳ ಅನುಷ್ಠಾನದಲ್ಲಿ ನೇರ, ನಿರಂತರ, ದಕ್ಷ, ನಿಯತಕಾಲಿಕ ಮಾರ್ಗದರ್ಶನ ನೀಡಲು ಸನ್ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರ ಅಧ್ಯಕ್ಷತೆಯಲ್ಲಿ ರಚಿಸಲಾದ ಉನ್ನತ ಮಟ್ಟದ ಸಮಿತಿಯನ್ನು ಪುನರ್ ರಚಿಸುವ ಅಗತ್ಯ ಕಂಡುಬಂದಿರುವುದರಿಂದ ಸರ್ಕಾರದ

ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರೊಳಗೊಂಡ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ.

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ಬೆಂಗಳೂರು. | ಅಧ್ಯಕ್ಷರು |
| 2. | ಉಪ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು/ಬೆಂಗಳೂರು/ಬೆಳಗಾವಿ/ಗುಲ್ಬರ್ಗಾ ವಿಭಾಗ | ಸದಸ್ಯರು |
| 3. | ಅಧೀಕ್ಷಕ ಪುರಾತತ್ವಜ್ಞರು, ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು ವಲಯ ಮತ್ತು ಧಾರವಾಡ ವಲಯ | ಸದಸ್ಯರು |
| 4. | ಪುರಾತತ್ವ ಸಂರಕ್ಷಣಾ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು/ಬೆಂಗಳೂರು/ಬೆಳಗಾವಿ/ಗುಲ್ಬರ್ಗಾ ವಿಭಾಗ. | ಸದಸ್ಯರು |
| 5. | ಶ್ರೀ ಸುರೇಂದ್ರ ಕುಮಾರ್ ಹೆಗಡೆ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್, ಧರ್ಮಸ್ಥಳ/ಬೆಂಗಳೂರು | ಸದಸ್ಯರು |
| 6. | ನಿರ್ದೇಶಕರು, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್, ಧರ್ಮಸ್ಥಳ/ಬೆಂಗಳೂರು | ಸದಸ್ಯರು |
| 7. | ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯು ಮುಖ್ಯವಾದ ಸಮಿತಿಯಾಗಿದ್ದು, ವರ್ಷದಲ್ಲಿ ಹಲವಾರು ಬಾರಿ ಸಭೆ ನಡೆಸಬೇಕಾಗಿರುತ್ತದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಪ್ರತ್ಯೇಕ ಸಚಿವರಿಲ್ಲದ ಕಾರಣ ಮಾನ್ಯ ಮುಖ್ಯಮಂತ್ರಿಯವರೇ, ಈ ಇಲಾಖೆಯ ಉಸ್ತುವಾರಿ ವಹಿಸಿಕೊಂಡಿದ್ದು, ಸಮಯದ ಅಭಾವದಿಂದ ಸಭೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಸ್ಮಾರಕಗಳ ಸಂರಕ್ಷಣೆಗೆ, ಸಮರ್ಪಕ ನಿರ್ವಹಣೆಗೆ, ಕ್ರಿಯಾಯೋಜನೆಯನ್ನು ಅನುಮೋದಿಸಲು ಹಾಗೂ ಉಸ್ತುವಾರಿ ನೋಡಿಕೊಳ್ಳಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲು ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 14 ಕೆಎಂಯು 2010, ಬೆಂಗಳೂರು, ದಿನಾಂಕ: 12ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವತಿಯಿಂದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಸಹಯೋಗದೊಂದಿಗೆ ರಾಜ್ಯ ಸಂರಕ್ಷಿತ ಸ್ಮಾರಕಗಳ ನಿರ್ವಹಣೆ ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ಮಾರ್ಗದರ್ಶನ ನೀಡಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ಉನ್ನತ ಮಟ್ಟದ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ಬೆಂಗಳೂರು. | ಅಧ್ಯಕ್ಷರು |
| 2. | ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು | ಸದಸ್ಯರು |
| 3. | ನಿರ್ದೇಶಕರು, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್, ಧರ್ಮಸ್ಥಳ/ಬೆಂಗಳೂರು | ಸದಸ್ಯರು |
| 4. | ಉಪ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು/ಬೆಂಗಳೂರು/ಬೆಳಗಾವಿ/ಗುಲ್ಬರ್ಗಾ ವಿಭಾಗ. | ಸದಸ್ಯರು |
| 5. | ಅಧೀಕ್ಷಕರು ಪುರಾತತ್ವಜ್ಞರು, ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು ವಲಯ ಮತ್ತು ಧಾರವಾಡ ವಲಯ | ಸದಸ್ಯರು |
| 6. | ಪುರತತ್ವ ಸಂರಕ್ಷಣಾ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು/ಬೆಂಗಳೂರು/ಬೆಳಗಾವಿ/ಗುಲ್ಬರ್ಗಾ ವಿಭಾಗ. | ಸದಸ್ಯರು |
| 7. | ಶ್ರೀ ಸುರೇಂದ್ರ ಕುಮಾರ್ ಹೆಗಡೆ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್, ಧರ್ಮಸ್ಥಳ/ಬೆಂಗಳೂರು | ಸದಸ್ಯರು |
| 8. | ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 1261

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** : ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕಾಮಗಾರಿಗಳಿಗೆ ತಾಂತ್ರಿಕ ಮತ್ತು ಆಡಳಿತಾತ್ಮಕ ಮಂಜೂರಾತಿ ನೀಡುವ ಅಧಿಕಾರದ ಕುರಿತು.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ.05: ಉಖಾಯೋ : 2008, ಬೆಂಗಳೂರು, ದಿನಾಂಕ 02–01–2009.
2) ಸರ್ಕಾರದ ಆದೇಶ ಸಂ.ಗ್ರಾಅಪ.05:ಉಖಾಯೋ:2009, ಬೆಂಗಳೂರು, ದಿನಾಂಕ 30–04–2009.
3) ದಿನಾಂಕ 17–4–2010 ರಂದು ನಡೆದ ರಾಜ್ಯ ಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿ ಸಭೆಯಲ್ಲಿ ಚರ್ಚಿಸಿದ ಅನ್ವಯ.

**ಪ್ರಸ್ತಾವನೆ :**

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳನ್ನು ತ್ವರಿತವಾಗಿ ಗ್ರಾಮ ಮಟ್ಟದಲ್ಲಿ ಅನುಷ್ಠಾನಗೊಳಿಸಲು ಉಲ್ಲೇಖ (1) ಮತ್ತು (2)ರ ಆದೇಶಗಳಲ್ಲಿ ಕಾಮಗಾರಿಗಳಿಗೆ ತಾಂತ್ರಿಕ, ಆಡಳಿತಾತ್ಮಕ ಮಂಜೂರಾತಿ ನೀಡುವ ಅಧಿಕಾರ ಮತ್ತು ಕಾಮಗಾರಿಗಳ ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸುವ ಹಾಗೂ ಚೆಕ್ ಮೆಶರ್‌ಮೆಂಟ್ ಮಾಡಿ ದೃಢೀಕರಿಸುವ ಅಧಿಕಾರದ ಮಿತಿ, ಇನ್ನು ಮುಂತಾದವುಗಳ ಬಗ್ಗೆ ಈಗಾಗಲೇ ಸರ್ಕಾರದ ಆದೇಶಗಳಲ್ಲಿ ತಿಳಿಸಲಾಗಿತ್ತು. ಆದರೆ ದಿನಾಂಕ 17–04–2010ರಂದು ನಡೆದ ರಾಜ್ಯ ಮಟ್ಟದ – ಜಾಗೃತ ಮತ್ತು ಉಸ್ತುವಾರಿ ಸಮಿತಿಯ ಸಭೆಯಲ್ಲಿ ಯೋಜನಾ ಅನುಷ್ಠಾನದಲ್ಲಿ ಕ್ಷೇತ್ರ ಮಟ್ಟದಲ್ಲಿ ಹಲವಾರು ಲೋಪದೋಷಗಳು ಹಾಗೂ ದುರುಪಯೋಗ ಪ್ರಕರಣಗಳು ಕಂಡುಬಂದಿರುವುದಾಗಿ ಸಮಿತಿಯು ಅಭಿಪ್ರಾಯ ಪಟ್ಟಿರುತ್ತದೆ.

ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹೆಚ್ಚಿನ ಜವಾಬ್ದಾರಿಯನ್ನು ತಾಲ್ಲೂಕು/ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ನೀಡುವುದು ಸೂಕ್ತವೆಂದು ಮತ್ತು ಸದರಿ ಲೋಪದೋಷಗಳು ಯೋಜನಾ ಅನುಷ್ಠಾನದಲ್ಲಿ ಮರುಕಳಿಸದಂತೆ ಕ್ರಮ ವಹಿಸಬೇಕಾಗಿದ್ದು ಕೂಡಲೇ ಸದರಿ ಅದೇಶಗಳಲ್ಲಿ ಮೇಲೆ ಸೂಚಿಸಿರುವ ವಿಚಾರಗಳಿಗೆ ಸೂಕ್ತವಾದ ಮಾರ್ಪಾಡನ್ನು ತಂದು ಅದೇಶವನ್ನು ಹೊರಡಿಸುವಂತೆ ಸಮಿತಿಯು ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತದೆ. ಈ ಸಂಬಂಧ ತಾಂತ್ರಿಕ ಅನುಮೋದನೆ, ಆಡಳಿತಾತ್ಮಕ ಅನುಮೋದನೆ ಹಾಗೂ ಅಳತೆ ಪುಸ್ತಕದಲ್ಲಿ ಅಳತೆಯ ದಾಖಲಾತಿ ಮತ್ತು ಚೆಕ್ ಮೆಶರ್‌ಮೆಂಟ್ ಅಧಿಕಾರದ ಮಿತಿ ಇವುಗಳ ಕುರಿತು ಹೊರಡಿಸಲಾಗಿರುವ ಉಲ್ಲೇಖದ ಆದೇಶಗಳನ್ನು ಕೂಡಲೇ ಸೂಕ್ತ ಮಾರ್ಪಾಡಿನೊಂದಿಗೆ ಜಾರಿಗೊಳಿಸಬೇಕಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂ.ಗ್ರಾಅಪ, 05:ಉಖಾಯೋ:2008, ಬೆಂಗಳೂರು, ದಿನಾಂಕ: 6ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾಮಗಾರಿಗಳ ಸಮರ್ಪಕ ಅನುಷ್ಠಾನಕ್ಕಾಗಿ ಉಲ್ಲೇಖ (1) ಮತ್ತು (2)ರ ಆದೇಶಗಳನ್ನು ಮಾರ್ಪಡಿಸಿ, ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ಕೆಳಕಂಡ ಸಕ್ಷಮ ಪ್ರಾಧಿಕಾರಗಳಿಂದ ತಾಂತ್ರಿಕ ಮತ್ತು ಆಡಳಿತಾತ್ಮಕ ಅನುಮೋದನೆಯನ್ನು ಪಡೆದು ಅನುಷ್ಠಾನಗೊಳಿಸಲು ಮತ್ತು ಕಾಮಗಾರಿಗಳ ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸಲು ಹಾಗೂ ಚೆಕ್ ಮೆಶರ್‌ಮೆಂಟ್ ಮಾಡಿ ದೃಢೀಕರಿಸಲು ಆದೇಶಿಸಿದೆ.

**ತಾಂತ್ರಿಕ ಅನುಮೋದನೆ ಮತ್ತು ಕಾಮಗಾರಿಗಳ ಅಳತೆ ದಾಖಲಾತಿ ಮತ್ತು ಚೆಕ್ ಮೆಶರ್‌ಮೆಂಟ್ :**

| *ಕ್ರಮ ಸಂಖ್ಯೆ* | *ಇಲಾಖೆಗಳ ಹೆಸರು* | *ತಾಂತ್ರಿಕ ಅನುಮೋದನೆಯನ್ನು ನೀಡುವ ವಿವಿಧ ಸಕ್ಷಮ ಪ್ರಾಧಿಕಾರಗಳ ಪದನಾಮದ ಹೆಸರು* | *ಕಾಮಗಾರಿಗಳ ಅಂದಾಜುಗಳಿಗೆ ಅನುಮೊದನೆ ನೀಡುವ ಮೊತ್ತದ ಮಿತಿ (ರೂ. ಲಕ್ಷಗಳಲ್ಲಿ)* | *ಅಳತೆ ಪುಸ್ತಕದಲ್ಲಿ ಅಳತೆ ದಾಖಲಾತಿ* | *ಪ್ರಗತಿಯಲ್ಲಿರುವ ಕಾಮಗಾರಿಗಳ ಚೆಕ್ ಮೆಶರ್‌ಮೆಂಟ್ ಮಾಡುವವರು* | *ಮುಕ್ತಾಯವಾದ ಕಾಮಗಾರಿಗಳ ಬಿಲ್ಲುಗಳನ್ನು ಅಂತಿಮಗೊಳಿಸಲು ಅಂತಿಮ ಚೆಕ್ ಮೆಶರ್‌ಮೆಂಟ್ ಮಾಡುವವರು* |
|---|---|---|---|---|---|---|
| 1. | ಅರಣ್ಯ | ಅ. ವಲಯ ಅರಣ್ಯ ಸಂರಕ್ಷಣಾಧಿಕಾರಿ (RFO)<br>ಆ. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ (ACF)<br>ಇ. ಉಪ ಅರಣ್ಯ ಸಂರಕ್ಷಣಾಧಿಕಾರಿ (DCF) | 1.00<br>1.00 ರಿಂದ 10.00<br>10.00 ಲಕ್ಷಕ್ಕೂ ಮೇಲ್ಪಟ್ಟು | ಉದ್ಯೋಗಮಿತ್ರ / ತಾಂತ್ರಿಕ ಸಹಾಯಕ/ವಲಯ ಅರಣ್ಯ ಸಂರಕ್ಷಣಾಧಿಕಾರಿ (RFO) | ತಾಂತ್ರಿಕ ಸಹಾಯಕ/ ವಲಯ ಅರಣ್ಯ ಸಂರಕ್ಷಣಾಧಿಕಾರಿ (RFO) | ಕಾಮಗಾರಿಗಳ ಅಂದಾಜು ವೆಚ್ಚಗಳಿಗೆ ತಾಂತ್ರಿಕ ಮಂಜೂರಾತಿ ನೀಡಿದ ಸಕ್ಷಮ ಪ್ರಾಧಿಕಾರ |
| 2. | ಜಲಾನಯನ | ಅ. ತಾಲ್ಲೂಕು ಜಲಾನಯನ ಅಭಿವೃದ್ಧಿ ಅಧಿಕಾರಿ<br>ಆ. ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ | 10.00<br>10.00 ಲಕ್ಷಕ್ಕೂ ಮೇಲ್ಪಟ್ಟು | ಉದ್ಯೋಗಮಿತ್ರ / ತಾಂತ್ರಿಕ ಸಹಾಯಕ/ ತಾಲ್ಲೂಕು ಜಲಾನಯನ ಅಭಿವೃದ್ಧಿ | ತಾಂತ್ರಿಕ ಸಹಾಯಕ/ ತಾಲ್ಲೂಕು ಜಲಾನಯನ ಅಭಿವೃದ್ಧಿ ಅಧಿಕಾರಿ | |

| | | | | | |
|---|---|---|---|---|---|
| | | | | ಅಧಿಕಾರಿ | |
| 3. | ತೋಟಗಾರಿಕೆ | ಅ. ಸಹಾಯಕ ತೋಟಗಾರಿಕಾ ಅಧಿಕಾರಿ<br>ಆ. ಹಿರಿಯ ಸಹಾಯಕ ನಿರ್ದೇಶಕರು/ ಸಹಾಯಕ ನಿರ್ದೇಶಕರು<br>ಇ. ಉಪ ನಿರ್ದೇಶಕರು | 1.00<br>1.00 ರಿಂದ 10.00<br>10.00 ಲಕ್ಷಕ್ಕೂ ಮೇಲ್ಪಟ್ಟು | ಉದ್ಯೋಗಮಿತ್ರ / ತಾಂತ್ರಿಕ ಸಹಾಯಕ/ ಸಹಾಯಕ ತೋಟಗಾರಿಕಾ ಅಧಿಕಾರಿ | ತಾಂತ್ರಿಕ ಸಹಾಯಕ/ ಸಹಾಯಕ ತೋಟಗಾರಿಕಾ ಅಧಿಕಾರಿ |
| 4. | ಪಂಚಾಯತ್‌ರಾಜ್ ಇಂಜಿನಿಯರಿಂಗ್/ ಬೃಹತ್ ನೀರಾವರಿ / ಸಣ್ಣ ನೀರಾವರಿ | ಅ. ಸಹಾಯಕ ಅಭಿಯಂತರು/ಕಿರಿಯ ಅಭಿಯಂತರು<br>ಆ. ಸಹಾಯಕ ಕಾರ್ಯಪಾಲಕ ಅಭಿಯಂತರು<br>ಇ. ಕಾರ್ಯಪಾಲಕ ಅಭಿಯಂತರರು | 1.00<br>1.00 ರಿಂದ 10.00<br>10.00 ಲಕ್ಷಕ್ಕೂ ಮೇಲ್ಪಟ್ಟು | ಉದ್ಯೋಗಮಿತ್ರ / ತಾಂತ್ರಿಕ ಸಹಾಯಕ/ ಸಹಾಯಕ ಅಭಿಯಂತರು/ ಕಿರಿಯ ಅಭಿಯಂತರು | ತಾಂತ್ರಿಕ ಸಹಾಯಕ/ ಸಹಾಯಕ ಅಭಿಯಂತರರು/ ಕಿರಿಯ ಅಭಿಯಂತರರು |
| 5. | ಕೃಷಿ | ಅ. ಸಹಾಯಕ ಕೃಷಿ ಅಧಿಕಾರಿ<br>ಆ. ಹಿರಿಯ ಸಹಾಯಕ ನಿರ್ದೇಶಕರು/ಸಹಾಯಕ ಕೃಷಿ ನಿರ್ದೇಶಕರು<br>ಇ. ಉಪ ಕೃಷಿ ನಿರ್ದೇಶಕರು | 1.00<br>1.00 ರಿಂದ 10.00<br>10.00 ಲಕ್ಷಕ್ಕೂ ಮೇಲ್ಪಟ್ಟು | ಉದ್ಯೋಗಮಿತ್ರ /ತಾಂತ್ರಿಕ ಸಹಾಯಕ/ ಸಹಾಯಕ ಕೃಷಿ ಅಧಿಕಾರಿ | ತಾಂತ್ರಿಕ ಸಹಾಯಕ/ ಸಹಾಯಕ ಕೃಷಿ ಅಧಿಕಾರಿ |
| 6. | ರೇಷ್ಮೆ | ಅ. ರೇಷ್ಮೆ ವಿಸ್ತೀರ್ಣಾಧಿಕಾರಿ<br>ಆ. ರೇಷ್ಮೆ ಸಹಾಯಕ ನಿರ್ದೇಶಕರು<br>ಇ. ರೇಷ್ಮೆ ಉಪ ನಿರ್ದೇಶಕರು | 1.00<br>1.00 ರಿಂದ 10.00<br>10.00 ಲಕ್ಷಕ್ಕೂ ಮೇಲ್ಪಟ್ಟು | ಉದ್ಯೋಗಮಿತ್ರ /ತಾಂತ್ರಿಕ ಸಹಾಯಕ ರೇಷ್ಮೆ ವಿಸ್ತೀರ್ಣಾ ಧಿಕಾರಿ | ತಾಂತ್ರಿಕ ಸಹಾಯಕ ರೇಷ್ಮೆ ವಿಸ್ತೀರ್ಣಾಧಿಕಾರಿ |
| 7. | ಮೀನುಗಾರಿಕೆ | ಅ. ಸಹಾಯಕ ಮೀನುಗಾರಿಕೆ ಅಧಿಕಾರಿ<br>ಆ. ಹಿರಿಯ ಸಹಾಯಕ ನಿರ್ದೇಶಕರು/ಸಹಾಯಕ ನಿರ್ದೇಶಕರು<br>ಇ. ಉಪ ನಿರ್ದೇಶಕರು | 1.00<br>1.00 ರಿಂದ 10.00<br>10.00 ಲಕ್ಷಕ್ಕೂ ಮೇಲ್ಪಟ್ಟು | ಉದ್ಯೋಗಮಿತ್ರ /ತಾಂತ್ರಿಕ ಸಹಾಯಕ/ ಸಹಾಯಕ ಮೀನುಗಾರಿಕೆ ಅಧಿಕಾರಿ | ತಾಂತ್ರಿಕ ಸಹಾಯಕ/ ಸಹಾಯಕ ಮೀನುಗಾರಿಕೆ ಅಧಿಕಾರಿ |
| 8. | ಪಶುಸಂಗೋಪನೆ | ಅ. ಹಿರಿಯ ಸಹಾಯಕ ನಿರ್ದೇಶಕರು/ ಸಹಾಯಕ ನಿರ್ದೇಶಕರು<br>ಆ. ಉಪ ನಿರ್ದೇಶಕರು | 10.00<br>10.00 ಲಕ್ಷಕ್ಕೂ ಮೇಲ್ಪಟ್ಟು | ಉದ್ಯೋಗಮಿತ್ರ /ತಾಂತ್ರಿಕ ಸಹಾಯಕ/ ಹಿರಿಯ ಸಹಾಯಕ ನಿರ್ದೇಶಕರು/ಸ ಹಾಯಕ ನಿರ್ದೇಶಕರು | ತಾಂತ್ರಿಕ ಸಹಾಯಕ/ ಹಿರಿಯ ಸಹಾಯಕ ನಿರ್ದೇಶಕರು/ ಸಹಾಯಕ ನಿರ್ದೇಶಕರು |

*ಸೂಚನೆ :–* ಇತರೆ ಯಾವುದೇ ಇಲಾಖೆಗೆ ಸಂಬಂಧಪಟ್ಟ ಯೋಜನೆಗಳನ್ನು ಕೈಗೆತ್ತಿಕೊಳ್ಳುವುದರ ಸಂಬಂಧ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವ ಸಕ್ಷಮ ಪ್ರಾಧಿಕಾರಕ್ಕೆ ಸರಿಸಮಾನವಾಗಿರುವ ಸದರಿ ಇಲಾಖೆಯಲ್ಲಿನ ಯಾವುದೇ ಅಧಿಕಾರಿಗೆ ಅದೇ ಮೊತ್ತದ ಯೋಜನಾ ಅಂದಾಜುಗಳಿಗೆ ತಾಂತ್ರಿಕ ಅನುಮೋದನೆ ನೀಡುವ ಅಧಿಕಾರವಿರುತ್ತದೆ.

**ಆಡಳಿತಾತ್ಮಕ ಮಂಜೂರಾತಿ :**

ತಾಂತ್ರಿಕ ಅನುಮೋದನೆಯಾದ ನಂತರ ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯತಿಗಳ ಆಯವ್ಯಯ ಮತ್ತು ಲೆಕ್ಕ ಪತ್ರಗಳು) ನಿಯಮಗಳು 2006ರ ರೀತ್ಯಾ ಅಂದಾಜು ವೆಚ್ಚ ರೂ. 10.00 ಲಕ್ಷಗಳ ಒಳಗಿದ್ದಲ್ಲಿ ಗ್ರಾಮ ಪಂಚಾಯತಿಯು, ರೂ. 10.00 ಲಕ್ಷಗಳನ್ನು ಮೀರಿದಲ್ಲಿ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯ ಹಾಗೂ ರೂ. 30.00 ಲಕ್ಷಗಳನ್ನು ಮೀರಿದಲ್ಲಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಆಡಳಿತಾತ್ಮಕ ಮಂಜೂರಾತಿಯನ್ನು ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎನ್. ಎಸ್. ಪ್ರಸನ್ನಕುಮಾರ್)**

ನಿರ್ದೇಶಕರು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಪಿ.ಆರ್. 1262 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ENERGY SECRETARIAT

**Sub :-** Designating Karnataka Renewable Energy Development Limited, Bangalore as the competent authority under "Scheme for Roof-Top PV and others small solar power plants connected to distribution network (below 33Kv under Jawaharlal Nehru National Solar Mission (JNNSM)-reg.

**Read :-** D.O. Letter No. KRED/07/SWH/2010/973 dated : 9-04-2010 received from the Managing Director, Karnataka Renewable Energy Development Limited, Bangalore.

**Preamble:**

In order to give a thrust to rooftop PV and other small solar power plant connected at distribution network at voltage levels below 33 KV envisaged under Phase 1 of the Jawaharlal Nehru National Solar Mission (JNNSM), the Ministry of New and Renewable Energy (MNRE) proposes to launch a programme on generation based incentives. Henceforth the programme shall be referred to as "Rooftop PV and Small Solar Generation Programme" (RPSSGP).

As per the draft guidelines of MNRE for Rooftop PV and other small Solar Power Plants connected to distribution network (below 33 KV) under Jawaharlal Nehru National Solar Mission (JNNSM), the State Government is required to designate a "Competent Authority" empowered to issue certificate required for registering the projects with IREDA and subsequently reporting progress on implementation of these projects.

In the D. O. letter read above, the Managing Director, Karnataka Renewable Energy Development Limited, Bangalore, has sent a proposal for designating KREDL as the competent authority to issue certificate of Pre-Registration in respect of Rooftop PV and other small power plants connected to HT level (below 33 KV) of distribution network.

The proposal has been examined in detail and issued following Order :-

**Government Order No. EN 131 NCE 2010, Bangalore, dated : 10-05-2010**

Government is pleased to designate the Karnataka Renewable Energy Development Limited, Bangalore as a 'Competent Authority' to issue certificate required for registering the projects with IREDA and to review and report on the progress of these projects to the Central Government.

By Order and in the name of the Governor of Karnataka

(**S. J. SAMPATH KUMAR)**
Under Secretary to Government,
Energy Department

P.R. 1263

## ವಸತಿ ಸಚಿವಾಲಯ

**ವಿಷಯ** : ಹರಿಹರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ :–

**ಓದಲಾಗಿದೆ** : 1) ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1999, ದಿನಾಂಕ 10–05–2000
2) ಸರ್ಕಾರದ ಆದೇಶ ಸಂ.ವಇ/18/ಹೆಚ್ಎಎಸ್/2008, ದಿನಾಂಕ 16–09–2009

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಅದೇಶದನ್ವಯ ಮತ್ತು ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ. ಹರಿಹರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 50 ಹೆಚ್ಎಎಸ್ 2008, ಬೆಂಗಳೂರು, ದಿನಾಂಕ: 13ನೇ ಮೇ 2010**

ಹರಿಹರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಕೃಷ್ಣ ತಲ್ಲೂರ ಬಿನ್ ಅಪ್ಪಾಜಿ ತಲ್ಲೂರು 2ನೇ ಮುಖ್ಯ ರಸ್ತೆ, 8ನೇ ಅಡ್ಡ ರಸ್ತೆ, ವಿಜಯನಗರ ಬಡಾವಣೆ, ಹರಿಹರ. | ಸಾಮಾನ್ಯ |

| | | |
|---|---|---|
| 2. | ಶ್ರೀ ವಾಸು ಚಂದಾಪುರ ಬಿನ್ ನಿಂಗಪ್ಪ, ಭರಂಪುರ, ಹರಿಹರ | ಹಿಂದುಳಿದ ವರ್ಗ |
| 3. | ಶ್ರೀ ಹನುಮಂತಪ್ಪ ಬಿನ್ ಗೂರಪ್ಪ, ಜೆ. ಸಿ. ಬಡಾವಣೆ, ಹರಿಹರ | ಪರಿಶಿಷ್ಟ ಜಾತಿ |
| 4. | ಶ್ರೀಮತಿ ಶಕೀಲಾಬಾನು ಕೋಂ ಟಿ. ಮುಗ್ದುಂಸಾಬ್, ಪ್ರಶಾಂತನಗರ, ಹರಿಹರ | ಅಲ್ಪಸಂಖ್ಯಾತರು (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಆರ್. ವಲ್ಲೂರ)**
ಪಿ.ಆರ್. 1264 ಪಿತಾಧಿಕಾರಿ–2, ವಸತಿ ಇಲಾಖೆ

**ವಸತಿ ಸಚಿವಾಲಯ**

**ಸೇರ್ಪಡೆ**

ಸಂ. ವಇ 45 ಹೆಚ್ಎಎಮ್ 2010, ಬೆಂಗಳೂರು, ದಿನಾಂಕ 30ನೇ ಏಪ್ರಿಲ್ 2010

**ವಿಷಯ** : ನಗರ ಪ್ರದೇಶದ ಬಡಜನತೆಗಾಗಿ "ನನ್ನ ಮನೆ – ಧಾರಣೀಯ ಗೃಹ ನಿರ್ಮಾಣ ಯೋಜನೆ" (Affordable Housing Scheme) ಅನುಸ್ಠಾನಗೊಳಿಸುವ ಮುನ್ನ ಪ್ರಾಯೋಗಿಕವಾಗಿ ಮನೆಗಳನ್ನು ನಿರ್ಮಿಸಿ ಹಂಚುವ ಬಗ್ಗೆ.

**ಉಲ್ಲೇಖ** : ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪತ್ರ ಸಂ. MD RGRHCL.02 GEN 163 2008/10719 ದಿನಾಂಕ 21–04–2010.

ಸರ್ಕಾರದ ಆದೇಶ ಸಂ. ವಇ 20 ಹೆಚ್ಎಹೆಚ್ 2010, ದಿನಾಂಕ 26–03–2010ರಲ್ಲಿನ ಆದೇಶದ ಭಾಗದಲ್ಲಿ ಈ ಕೆಳಗಿನ ಕಂಡಿಕೆಯನ್ನು ಸೇರಿಸಿಕೊಂಡು ಓದತಕ್ಕದ್ದು.

II. ನಿಗದಿಪಡಿಸಿದ ಗುರಿಗೆ ಈ ಕೆಳಗಿನಂತೆ ಮೀಸಲಾತಿಯು ಅನ್ವಯವಾಗುತ್ತದೆ.

ಅ. ಪರಿಶಿಷ್ಟ ಜಾತಿ ಫಲಾನುಭವಿಗಳಿಗೆ ಕನಿಷ್ಠ 18% ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಕನಿಷ್ಠ 4.75% ಮೀಸಲಾತಿಯನ್ನು ನಿಗದಿಪಡಿಸಿದೆ.

ಆ. ಅಂಗವಿಕಲರಿಗೆ ಕನಿಷ್ಠ 5% ರಷ್ಟು ಮೀಸಲಾತಿ ನಿಗದಿಪಡಿಸಿದೆ.

ಇ. ಮಾಜಿ ಸೈನಿಕರಿಗೆ ಅಥವಾ ಸೈನಿಕರ ವಿಧವೆಯವರಿಗೆ ಕನಿಷ್ಠ 1%ರಷ್ಟು ಮೀಸಲಾತಿ ನಿಗದಿಪಡಿಸಿದೆ.

ಈ. ಹಿರಿಯ ನಾಗರಿಕರಿಗೆ ಕನಿಷ್ಠ 2% ರಷ್ಟು ಮೀಸಲಾತಿ ನಿಗದಿಪಡಿಸಿದೆ.

ಉ. ಮೇಲ್ಕಾಣಿಸಿದ ಮೀಸಲಾತಿಯಂತೆ ಫಲಾನುಭವಿಗಳು ಲಭ್ಯವಿಲ್ಲದಿದ್ದಲ್ಲಿ, ಫಲಾನುಭವಿಗಳು ಲಭ್ಯವಿಲ್ಲದಿರುವ ಬಗ್ಗೆ ಖಚಿತಪಡಿಸಿಕೊಂಡು ಗುರಿಯನ್ನು ಸಾಮಾನ್ಯ ವರ್ಗಕ್ಕೆ ವರ್ಗಾಯಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಆರ್. ವಲ್ಲೂರ)**
ಊ.ಪಿ.ಆರ್. 1265 ಪಿತಾಧಿಕಾರಿ–2, ವಸತಿ ಇಲಾಖೆ

**HEALTH AND FAMILY WELFARE SECRETARIAT**

**Sub :-** Constitution of State Level Authorisation Committee for Transplantation of Human Organs-reg.

**Read :-** 1. Notification No. GSR, 571 (E) dated 31-7-2008, issued by the Ministry of Health and Family Welfare, Govt. of India, New Delhi.
2. Single file No. COM/JDM/HOT/1/2010-11, received from the Commissioner, Health & F.W. Services, Bangalore.

**Preamble:**

The Ministry of Health and Family Welfare, Government of India, New Delhi, has made certain amendments to the Transplantation of Human Organs Rules, 1995 vide Notification read at (1) above. According to the amendment made to Rule 6 of the said Rules, State Level Authorisation Committee : Constitution of Hospitalwise Additional Authorisation Committees and State or Direct Level Authorisation Committees have to be constituted.

The Commissioner, Health and Family Welfare Services, vide reference (2) above has proposed to constitute State Level Authorisation Committee under the Chairmanship of Dr. G.K. Venkatesh, Director, institute of Nephro-Urology, Victoria Hospital Campus, Bangalore with other members and requested for issue of orders in this regard.

Government have examined the proposal in detail and hence the following Order.

**Government Order No. HFW 71 FPE 2010, Bangalore, dated : 07-05-2010**

In supersession of the earlier Orders issued with regard to constitution of State Level Authorisation Committee and in exercise of the powers conferred under clause (B) of the rule 6A of Transplantation of Human Organs (Amendment) Rules, 2008, Government of Karnataka are pleased to reconstitute State level Authorisation Committee with the following for purposes of carrying out the provisions enunciated in the said Act and the Rules framed thereunder :-

| | | |
|---|---|---|
| 1. | Dr. G. K. Venkatesh, Director, Institute of Nephro-Urology, Victoria Hospital Campus, Bangalore-560 002 | Member |
| 2. | Dr. Chikkananjappa, President, Karnataka Medical Council, K. R. Road, Bangalore. | Member |
| 3. | Dr. Mahableswar Maiya, Maiya Hospital, Near Ashoka Pillar, Jayanagar, Bangalore-560011. | Member |
| 4. | Dr. R. Chandrashekar, M.D. (R.T.) Former Vice-Chancellor, Rajiv Gandhi University of Health Sciences, No. 30/41, 13th Cross, 15th Main, Padmanabha Nagar, Bangalore-70 | Member |
| 5. | Dr. B. K. Shalini, No. 3,4th Temple Street Malleswaram, Bangalore-560 003. | Member |
| 6. | Joint Director (Medical), Health & F. W. Services representing Secretary, Health & Family Welfare Department | Member |
| 7. | Director, Health & Family Welfare or her/his nominee not below the rank of Deputy Director, Health & F. W. Services. | Member |

The State Level Authorisation Committee may select one of its members as Chairman or the convenor of the Committee at the time of its first meeting.

By Order and in the name of the Governor of Karnataka
(**CHIKKEGOWDA)**
Under Secretary to Government,
Health and Family Welfare Department

P.R. 1266

**HEALTH AND FAMILY WELFARE SECRETARIAT**

**Sub :-** Constitution of Additional Authorisation Committee for Transplantation of Human Organs in Columbia Asia Hospital, Bangalore-reg.

**Read :-** 1. Notification No. GSR, 571 (E) dated 31-7-2008, issued by the Ministry of Health and Family Welfare, Govt. of India, New Delhi.
2. Single file No. COM/JDM/HOT/5/2009-10, received from the Commissioner, Health & F.W. Services, Bangalore.

**Preamble:**

The Ministry of Health and Family Welfare, Government of India, New Delhi, has made certain amendments to the Transplantation of Human Organs Rules 1995 vide Notification read at (1) above. According to the amendment made to Rule 6 of the said Rules, State Level Authorisation Committee; Constitution of Hospitalwise Additional Authorisation Committees; and State or Direct Level Authorisation Committees have to be Constituted.

The Commissioner, Health and Family Welfare Services has sent proposal for constitution of Additional Authorisation Committee in Columbia Asia Hospital, Bangalore as the said hospital has

conducted more than 25 transplantations in 2009 and fulfills the conditions stipulated under the said amended Rules.

Government have examined the proposal in detail and hence the following Order.

**Government Order No. HFW 45 FPE 2010, Bangalore, dated : 07-05-2010**

In view of the circumstances explained in the preamble and in exercise of the powers conferred under clause (A) of Rule 6A of Transplantation of Human organs (Amendment) Rules, 2008, Government of Karnataka are pleased to constitute Additional Authorisation Committee in Columbia Asia Hospital, Bangalore, for purposes of carrying out the provisions enunciated in Transplantation of Human Organs Act 1994 and the Rules framed thereunder as follows :-

| | | |
|---|---|---|
| 1. | Dr. Nandakumar Jairam, Group Medical Director, Columbia Asia Hospital, Bangalore. | Member |
| 2. | Dr. Arvind Kasargod, Consultant Paediatric Intensivist, Columbia Asia, Hospital, Bangalore. | Member |
| 3. | Dr. Arjun Srivatsa, Consultant Neuro Surgeon, Columbia Asia Hospital, Bangalore. | Member |
| 4. | Mr. Justice Shivshankar Bhat, Retired Judge of High Court of Karnataka, No. 401, 12th main RMV Extension, Sadashivanagar, Bangalore-80 | Member |
| 5. | Mr. B. K. Ratnakar Rao, Retd IPS, officer, No. 725, 9th Main Banashankari, 2nd Stage, Bangalore-560 070. | Member |
| 6. | Joint Director (Medical), Health & F. W. Services representing Secretary, Health & Family Welfare Department | Member |
| 7. | Director, Health & Family Welfare Services or her/his nominee not below the rank of Deputy Director, Health & F. W. Services. | Member |

The Additional Authorisation Committee may select one of its members as the Chairman or the convenor of the Committee, as the case may be, at the time of its first meeting.

By Order and in the name of the Governor of Karnataka

(**CHIKKEGOWDA)**

P.R. 1267

Under Secretary to Government,

Health and Family Welfare Department

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ವ್ಯಾಪ್ತಿಗೊಳಪಡುವ ಇಲಾಖೆ/ನಿಗಮ/ಮಂಡಳಿ/ಸೊಸೈಟಿ/ಅಕಾಡೆಮಿ ಹುದ್ದೆಗಳಿಗೆ ಮಂಜೂರಾಗಿರುವ ಜಂಟಿ ನಿರ್ದೇಶಕರುಗಳಿಗೆ ತತ್ಸಮಾನ ಹುದ್ದೆಗಳನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ಹುದ್ದೆಗೆ ಹಾಲಿ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮದನ್ವಯ ಸಂವರ್ಗೀಕರಣಗೊಳಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಡಿಪಿಎಆರ್ 38 ಎಸ್‌ಎಸ್‌ಆರ್ 85, ದಿನಾಂಕ : 13–06–1986.
2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಡಿಪಿಎಆರ್ 35 ಎಸ್‌ಎಸ್‌ಆರ್ 90, ದಿನಾಂಕ : 1–10–1990.
3. ಸರ್ಕಾರದ ಆದೇಶ ಸಂಖ್ಯೆ : ಮಮಇ 41 ಮಮಅ 96, ದಿನಾಂಕ : 03–09–1997.
4. ಸರ್ಕಾರದ ಆದೇಶ ಸಂಖ್ಯೆ : ಮಮಇ 215 ಮಭಾಬ 2008, ದಿನಾಂಕ :30–10–2008.
5. ಬಾಲಭವನ ಸೊಸೈಟಿ ನಿರ್ವಹಣಾ ಮಂಡಳಿ ಸಭೆಯ ನಡುವಳಿ ದಿನಾಂಕ:17–07–2009.

**ಪ್ರಸ್ತಾವನೆ:**

ಮೇಲೆ ಉಲ್ಲೇಖ(1)ರ ದಿನಾಂಕ : 13–06–1986 ನ್ನು ಮತ್ತು (2)ರ ದಿನಾಂಕ : 01–10–1990ರ ಅಧಿಕೃತ ಜ್ಞಾಪನದಲ್ಲಿ ಓದಿಕೊಂಡಂತೆ ಹೊಸದಾಗಿ ಸೃಜಿಸಿರುವ ಹುದ್ದೆಗಳನ್ನು ನಿಯೋಜನೆ ಮೇಲೆ ಸಂಬಂಧಿಸಿದ ಆಡಳಿತ ಇಲಾಖೆಯ ತತ್ಸಮಾನ ಹುದ್ದೆಗಳ ಸಮನಾಂತರ ವೇತನ ಶ್ರೇಣಿಯಲ್ಲಿ ಹೆಚ್ಚುವರಿಯಾಗಿ ಭರ್ತಿ ಮಾಡಿ ವೃಂದ ಬಲದಲ್ಲಿ ಸೇರ್ಪಡೆ ಮಾಡಲು ಅವಕಾಶ ಕಲ್ಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪರಿಧಿಗೆ ಒಳಪಡುವ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬಾಲಭವನ ಸೊಸೈಟಿ ಮತ್ತು ಕರ್ನಾಟಕ ಬಾಲವಿಕಾಸ ಅಕಾಡೆಮಿ ಇಲ್ಲಿನ

ಜಂಟಿ ನಿರ್ದೇಶಕರ ಹುದ್ದೆಗೆ ಸಮಾನಾಂತರವಾದ ಹುದ್ದೆಗಳನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ಹುದ್ದೆಗೆ ಹಾಲಿ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮದನ್ವಯ ಸಂವರ್ಗೀಕರಣಗೊಳಿಸಬೇಕಾಗುತ್ತದೆ.

ಮೇಲೆ ಉಲ್ಲೇಖ (3)ರಿಂದ (5)ರವರೆಗಿನ ಆದೇಶ/ನಡವಳಿಯಲ್ಲಿ ಈ ಕೆಳಕಂಡ ನಿಗಮ/ಮಂಡಳಿಗಳಿಗೆ 3 ಜಂಟಿ ನಿರ್ದೇಶಕರ ಸಮನಾಂತರ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರ.ಸಂ | ನಿಗಮ/ಮಂಡಳಿಯ ಹೆಸರು | ಸೃಜನೆಯಾಗಿರುವ ಸರ್ಕಾರಿ ಆದೇಶ ಮತ್ತು ದಿನಾಂಕ | ಸೃಜಿಸಲ್ಪಟ್ಟ ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|---|---|
| 1. | ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ | ಸರ್ಕಾರಿ ಆದೇಶ ಸಂಖ್ಯೆ : ಮಮಇ 41 ಮಮಅ 96, ದಿನಾಂಕ : 03–09–1997 | ಜನರಲ್ ಮ್ಯಾನೇಜರ್ (ಅಭಿವೃದ್ಧಿ) | 01 |
| 2. | ಬಾಲಭವನ ಸೊಸೈಟಿ | ದಿ : 17–07–2007ರಂದು ನಡೆದ ಬಾಲಭವನ ಸೊಸೈಟಿ ನಿರ್ವಹಣಾ ಮಂಡಳಿ ಸಭೆಯ ನಡವಳಿ | ಕಾರ್ಯದರ್ಶಿ (ಜಂಟಿ ನಿರ್ದೇಶಕರು/ಉಪನಿರ್ದೇಶಕರು ತತ್ಸಮಾನ) | 01 |
| 3. | ಕರ್ನಾಟಕ ಬಾಲವಿಕಾಸ ಅಕಾಡೆಮಿ | ಸರ್ಕಾರದ ಆದೇಶ ಸಂಖ್ಯೆ : ಮಮಇ 215 ಮಭಾಬ 2008. ದಿ : 30–10–2008 | ಯೋಜನಾಧಿಕಾರಿ (ಜಂಟಿ ನಿರ್ದೇಶಕರು ಅಥವಾ ತತ್ಸಮಾನ) | 01 |
| | | | ಒಟ್ಟು | 03 |

ಪ್ರಸ್ತುತ ಬಾಲವಿಕಾಸ ಅಕಾಡೆಮಿ, ಧಾರವಾಡ ಯೋಜನೆಯ ಅನುಷ್ಠಾನಕ್ಕೆ ಜಂಟಿ ನಿರ್ದೇಶಕರ ವೃಂದದ ಸಮಾನಾಂತರ ಹುದ್ದೆಯನ್ನು ಕರ್ನಾಟಕ ಆಡಳಿತ ಸೇವೆ ಅಧಿಕಾರಿಯ ವರ್ಗಾವಣೆಯಿಂದ ನಿಯೋಜನೆಯ ಮೇಲೆ ಭರ್ತಿ ಮಾಡಲಾಗಿದ್ದು, ಸದರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ದಿಢೀರ್ ವರ್ಗಾವಣೆಯಿಂದ ಬಾಲವಿಕಾಸ ಅಕಾಡೆಮಿಯ ಕೆಲಸ ಕಾರ್ಯಗಳು ಕುಂಠಿತವಾಗಿರುವುದನ್ನು, ಸರ್ಕಾರ ಮನಗಂಡಿದೆ. ಅಂತೆಯೇ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಲ್ಲಿನ ಜನರಲ್ ಮ್ಯಾನೇಜರ್ (ಅಭಿವೃದ್ಧಿ) ಹುದ್ದೆಯು ಹಲವಾರು ವರ್ಷಗಳಿಂದ ಖಾಲಿ ಇರುವುದನ್ನು, ಜವಹರ ಬಾಲಭವನ ಕಾರ್ಯದರ್ಶಿ ಹುದ್ದೆಯಲ್ಲಿ ಕರ್ನಾಟಕ ಆಡಳಿತ ಸೇವೆ (ಹಿರಿಯ ಶ್ರೇಣಿ) ಅಧಿಕಾರಿಗಳು ನೇಮಿಸಲ್ಪಟ್ಟರೂ ಅವರು ಕೂಡ ಆಗಿಂದ್ದಾಗ್ಗೆ ವರ್ಗಾವಣೆ ಆಗುತ್ತಿದ್ದು, ಬಾಲಭವನದ ಕಾರ್ಯ ಪ್ರಗತಿ ಕುಂಠಿತಗೊಳ್ಳುತ್ತಿದೆ. ಈ ಹುದ್ದೆಗಳಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಯೋಜನೆಗಳನ್ನು ಅನುಷ್ಠಾನಕ್ಕೆ ತರುತ್ತಿರುವ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ಅಧಿಕಾರಿಗಳು ಕಾರ್ಯ ನಿರ್ವಹಿಸುವುದು ಉಚಿತವೆಂದು ಸರ್ಕಾರವು ತೀರ್ಮಾನಿಸಿದೆ. ಈ ಹಿನ್ನೆಲೆಯಲ್ಲಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ವೇತನ ಶ್ರೇಣಿಯ ಅಧಿಕಾರಿಗಳನ್ನು ಸದರಿ 3 ಹುದ್ದೆಗಳಿಗೆ ನಿಯೋಜನೆಯ ಮೇಲೆ ಭರ್ತಿ ಮಾಡುವುದು ಸೂಕ್ತವಾಗಿರುವುದರಿಂದ ಈ ಕೆಳಕಂಡ ಹೊಸದಾಗಿ ಹೆಚ್ಚುವರಿಯಾಗಿ ಸೃಜಿಸಿರುವ ಜಂಟಿ ನಿರ್ದೇಶಕರ ಹುದ್ದೆಗಳಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಜಂಟಿ ನಿರ್ದೇಶಕರ ಹುದ್ದೆಯ ಸಮಾನಾಂತರ ಹುದ್ದೆಗೆ ಹಾಲಿ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮದನ್ವಯ ಹಾಗೂ ಉಪ ನಿರ್ದೇಶಕರ ವೃಂದದ ಜೇಷ್ಠತಾ ಪಟ್ಟಿಯನ್ವಯ ಸದರಿ ಹುದ್ದೆಗಳನ್ನು ಸಂವರ್ಗೀಕರಣಗೊಳಿಸಲು ಕಾರ್ಯಕಾರಿ ಆದೇಶ ರಚಿಸಲು (ಒಂದು ಬಾರಿ ನೇಮಕಾತಿ ವಿಧಾನವನ್ನು ರಚಿಸಿ) ಹಾಗೂ ಆಯಾ ಸಂಸ್ಥೆಯ/ಇಲಾಖೆಯ ನೇಮಕಾತಿ ನಿಯಮಗಳಲ್ಲಿ ಈ ಬಗ್ಗೆ ಸೂಕ್ತ ರೀತಿ ಅಳವಡಿಸಲು ಕ್ರಮ ವಹಿಸಲು ಕೂಡ ನಿರ್ದೇಶನ ನೀಡುವುದು ಮತ್ತು ತದನಂತರದ ಅರ್ಹ ಅಧಿಕಾರಿಗಳ ಸೂಕ್ತತೆಯನ್ನು ಪರಿಶೀಲಿಸಿ ನಿಯೋಜನೆಯ ಮೇಲೆ ಭರ್ತಿ ಮಾಡಲು ಅವಶ್ಯಕವಾಗಿರುತ್ತದೆ.

| ಕ್ರ.ಸಂ | ನಿಗಮ/ಮಂಡಳಿಯ ಹೆಸರು | ಸೃಜನೆಯಾಗಿರುವ ಸರ್ಕಾರಿ ಆದೇಶ ಮತ್ತು ದಿನಾಂಕ | ಸೃಜಿಸಲ್ಪಟ್ಟ ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|---|---|
| 1. | ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ | ಸರ್ಕಾರಿ ಆದೇಶ ಸಂಖ್ಯೆ : ಮಮಇ 41 ಮಮಅ 96, ದಿನಾಂಕ : 03–09–1997 | ಜನರಲ್ ಮ್ಯಾನೇಜರ್ (ಅಭಿವೃದ್ಧಿ) | 01 |
| 2. | ಬಾಲಭವನ ಸೊಸೈಟಿ | ದಿನಾಂಕ 17–07–2007ರಂದು ನಡೆದ ಬಾಲಭವನ ಸೊಸೈಟಿ | ಕಾರ್ಯದರ್ಶಿ (ಜಂಟಿ ನಿರ್ದೇಶಕರು/ಉಪನಿರ್ದೇಶಕರು | 01 |

| | | | | |
|---|---|---|---|---|
| | | ನಿರ್ವಹಣಾ ಮಂಡಳಿ ಸಭೆಯ ನಡವಳಿ | ತತ್ಸಮಾನ) | |
| 3. | ಕರ್ನಾಟಕ ಬಾಲವಿಕಾಸ ಅಕಾಡೆಮಿ | ಸರ್ಕಾರದ ಆದೇಶ ಸಂಖ್ಯೆ : ಮಮಇ 215 ಮಭಾಬ 2008. ದಿ : 30–10–2008 | ಯೋಜನಾಧಿಕಾರಿ (ಜಂಟಿ ನಿರ್ದೇಶಕರು ಅಥವಾ ತತ್ಸಮಾನ) | 01 |
| | | | ಒಟ್ಟು | 03 |

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿನ ಜಂಟಿ ನಿರ್ದೇಶಕರ ವೃಂದ ಬಲಕ್ಕೆ ಮೇಲೆ ಹೇಳಿದ 3 ಜಂಟಿ ನಿರ್ದೇಶಕರ ಹುದ್ದೆಗೆ ಸಮಾನಾಂತರವಾದ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೇರ್ಪಡೆ ಮಾಡಿ ಆದೇಶ ಹೊರಡಿಸುವ ಅಗತ್ಯವಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 233 ಎಸ್‌ಜೆಡಿ 2010, ಬೆಂಗಳೂರು, ದಿನಾಂಕ : 12–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬಾಲಭವನ ಸೊಸೈಟಿ, ಕರ್ನಾಟಕ ಬಾಲವಿಕಾಸ ಅಕಾಡೆಮಿಯ ಜಂಟಿ ನಿರ್ದೇಶಕರಿಗೆ ಸಮನಾಂತರ ಹುದ್ದೆಗಳನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವೇತನಶ್ರೇಣಿ ರೂ. 20225–28270ರ ಜಂಟಿ ನಿರ್ದೇಶಕರ ವೃಂದ ಬಲಕ್ಕೆ ತಾತ್ಕಾಲಿಕವಾಗಿ ಸೇರ್ಪಡೆ ಮಾಡಿ ಆದೇಶಿಸಿದೆ.

| | | | |
|---|---|---|---|
| 1. | ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ | ಜನರಲ್ ಮ್ಯಾನೇಜರ್ (ಅಭಿವೃದ್ಧಿ) | –01 ಹುದ್ದೆ |
| 2. | ಬಾಲಭವನ ಸೊಸೈಟಿ | ಕಾರ್ಯದರ್ಶಿ (ಜಂಟಿ ನಿರ್ದೇಶಕರು/ಉಪನಿರ್ದೇಶಕರು ತತ್ಸಮಾನ) | –01 ಹುದ್ದೆ |
| 3. | ಕರ್ನಾಟಕ ಬಾಲವಿಕಾಸ ಅಕಾಡೆಮಿ | ಯೋಜನಾಧಿಕಾರಿ (ಜಂಟಿ ನಿರ್ದೇಶಕರು ಅಥವಾ ತತ್ಸಮಾನ) | –01 ಹುದ್ದೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1278

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ಹುದ್ದೆಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳು (ಸಾಮಾನ್ಯ ನೇಮಕಾತಿ ನಿಯಮಾವಳಿ) 1977ರ ನಿಯಮ 16(1)(ಎ) ರನ್ವಯ ನಿಯೋಜನೆ ಮೇಲೆ ಭರ್ತಿ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಡಿಪಿಎಆರ್ 38 ಎಸ್‌ಎಸ್‌ಆರ್ 85, ದಿನಾಂಕ : 13–06–1986.
2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಡಿಪಿಎಆರ್ 35 ಎಸ್‌ಎಸ್‌ಆರ್ 90, ದಿನಾಂಕ : 1–10–1990.
3. ಸರ್ಕಾರದ ಆದೇಶ ಸಂಖ್ಯೆ : ಮಮಇ 460 ಎಸ್‌ಜೆಡಿ 2003, ದಿನಾಂಕ : 26–10–2004.

**ಪ್ರಸ್ತಾವನೆ:**

ಮೇಲೆ ಉಲ್ಲೇಖ(1)ರ ದಿನಾಂಕ : 13–06–1986ನ್ನು ಮತ್ತು (2)ರ ದಿನಾಂಕ : 01–10–1990ರ ಅಧಿಕೃತ ಜ್ಞಾಪನದಲ್ಲಿ ಓದಿಕೊಂಡಂತೆ ಹೊಸದಾಗಿ ಸೃಜಿಸಿರುವ ಹುದ್ದೆಗಳನ್ನು ನಿಯೋಜನೆ ಮೇಲೆ ಸಂಬಂಧಿಸಿದ ಆಡಳಿತ ಇಲಾಖೆಯ

ತತ್ಸಮಾನ ಹುದ್ದೆಗಳ ಸಮನಾಂತರ ವೇತನ ಶ್ರೇಣಿಯಲ್ಲಿ ಹೆಚ್ಚುವರಿಯಾಗಿ ಭರ್ತಿ ಮಾಡಿ ವೃಂದ ಬಲದಲ್ಲಿ ಸೇರ್ಪಡೆ ಮಾಡಲು ಅವಕಾಶ ಕಲ್ಪಿಸಲಾಗಿದೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಕೃತ ಜ್ಞಾಪನ : ದಿ : 13–06–1986 ಮತ್ತು ದಿ : 01–10–1990ರನ್ವಯ ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ಹುದ್ದೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ಹುದ್ದೆಗೆ ಸಂವರ್ಗೀಕರಣಗೊಳಿಸಲು ಅವಕಾಶವಿರುವುದಿಲ್ಲ. ಆದಕಾರಣ, ಈ ಹುದ್ದೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ಸಮಾನಾಂತರ ವೇತನಶ್ರೇಣಿಯ ಅರ್ಹ ಅಧಿಕಾರಿಗಳನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 16(1)(ಎ)ರನ್ವಯ ನಿಯೋಜನೆ ಮೇಲೆ ಭರ್ತಿ ಮಾಡಲು ಸರ್ಕಾರವು ತೀರ್ಮಾನಿಸಿ ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ.: ಮಮಇ 233 ಎಸ್‌ಜೆಡಿ 2010, ಬೆಂಗಳೂರು, ದಿನಾಂಕ : 12–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ 1 ಜಂಟಿ ನಿರ್ದೇಶಕರ ಹುದ್ದೆಯನ್ನು ಹಿರಿಯ ನಾಗರಿಕರಿಗೆ ಸಂಬಂಧಿಸಿದ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ಸಮಾನಾಂತರ ವೇತನಶ್ರೇಣಿಯ ಅರ್ಹ ಅಧಿಕಾರಿಗಳನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳು (ಸಾಮಾನ್ಯ ನೇಮಕಾತಿ ನಿಯಮಾವಳಿ) 1977ರ ನಿಯಮ 16(1)(ಎ) ರನ್ವಯ ನಿಯೋಜನೆ ಮೇಲೆ ಭರ್ತಿ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1279

**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ : 32ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಮೂಅಇ 27 ರಾರಾಹೆ, 08 ದಿನಾಂಕ : 22–09–2009.
2. ದಿನಾಂಕ : 08–02–2010 ಸಂಖ್ಯೆ : ಮೂಅಇ 27 ರಾರಾಹೆ, 2008ರ ಸರ್ಕಾರಿ ಆದೇಶ.
3. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರ ದಿನಾಂಕ : 10–05–2010ರ ಪತ್ರ ಸಂಖ್ಯೆ : ಸಿಬಿಎಸ್‌ಹಭಪ : 34 : ಹಭಪ : 5465 : 2009–10.

**ಪ್ರಸ್ತಾವನೆ:**

ಭದ್ರಾವತಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 32ರ ಬದಲಿಗೆ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಾಣದ ಕಾಮಗಾರಿಯನ್ನು ರೂ. 12.00 ಕೋಟಿಗಳ ಪರಿಷ್ಕೃತ ಅಂದಾಜಿನಲ್ಲಿ ಲೋಕೋಪಯೋಗಿ ಇಲಾಖೆಯಿಂದ ಕೈಗೆತ್ತಿಕೊಳ್ಳಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

2. ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ 32ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಯ ಯುಟಿಲಿಟಿ ಸ್ಥಳಾಂತರಕ್ಕೆ ರೂ. 2.00 ಕೋಟಿಯನ್ನು (ರೂಪಾಯಿ ಎರಡು ಕೋಟಿಗಳು ಮಾತ್ರ) ಮೇಲೆ ಓದಲಾದ (2)ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

3. ವಿದ್ಯುತ್‌ಕಂಬಗಳ ಸ್ಥಳಾಂತರದ ಹಾಗೂ ಇತರೆ ಬಿಲ್ಲಿನ ಮೊತ್ತವನ್ನು ನಿಗದಿತ ಅವಧಿಯಲ್ಲಿ ಸಲ್ಲಿಸದೇ ಇರುವುದರಿಂದ ಮೇಲ್ಕಂಡ ಕಾಮಗಾರಿಗೆ ಬಿಡುಗಡೆ ಮಾಡಲಾದ ಮೊತ್ತವನ್ನು ದಿನಾಂಕ : 31–03–2010 ರೊಳಗಾಗಿ ಡ್ರಾ ಮಾಡಿರುವುದಿಲ್ಲ. ಆದ್ದರಿಂದ ಈ ಮೊತ್ತವು ಲ್ಯಾಪ್ಸ್ ಆಗಿರುತ್ತದೆ. ಸದರಿ ರೂ. 2.00 ಕೋಟಿ ಮೊತ್ತವನ್ನು ನವೀಕರಿಸಿ ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (3)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಕೋರಿರುತ್ತಾರೆ.

4. ಈ ಅಂಶಗಳೆಲ್ಲವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 27 ರಾರಾಹೆ 2008, ಬೆಂಗಳೂರು, ದಿನಾಂಕ : 18–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ 32ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ರೂ. 2.00 ಕೋಟಿಗಳನ್ನು (ರೂಪಾಯಿ ಎರಡು ಕೋಟಿಗಳು ಮಾತ್ರ) 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465–01–190–3–04–(ಯೋಜನೆ)–211 ಬಂಡವಾಳ" ಇದರ ಅಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 30.00 ಕೋಟಿಗಳಿಂದ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಶೇಷ ವಿಭಾಗ, ಶಿವಮೊಗ್ಗ ಇವರು ಸಾದಿಲ್ವಾರು ಬಿಲ್ಲಿನ ಮೂಲಕ ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದ್ದು.

3. ಈ ಆದೇಶವನ್ನು ದಿನಾಂಕ 16–05–2008 ಸಂಖ್ಯೆ : FD 1TFP 2008 ಸರ್ಕಾರಿ ಆದೇಶದಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1280

**ಎನ್. ಮಂಜುಳ ಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜುಗಳನ್ನು ಪರಿಶೀಲಿಸಲು ರಚಿಸಲಾಗಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಮುಂದೆ ಮಂಡಿಸುವ ಕಾಮಗಾರಿಗಳ ಅಂದಾಜು ಮೊತ್ತ ಪರಿಷ್ಕರಿಸುವ ಕುರಿತು ಆದೇಶ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 46 ಮಸಾವಿ 2008, ದಿನಾಂಕ : 31–01–2009.

2. ಪತ್ರ ಸಂಖ್ಯೆ : ಮುಸದ/ತಾಸ–4/ಸ.ಇಂ–10/ತಮೌನಿಸ/2009–10/1078 ದಿನಾಂಕ : 23–03–2010.

**ಪ್ರಸ್ತಾವನೆ:**

ರೂ. 50.00 ಲಕ್ಷಗಳಿಗೂ ಮೇಲ್ಪಟ್ಟ ಸಣ್ಣ ನೀರಾವರಿ ಇಲಾಖೆ ಕಾಮಗಾರಿಗಳ ಅಂದಾಜುಗಳನ್ನು ಪರಿಶೀಲಿಸಲು ಅಧಿಕಾರೇತರ ಹಾಗೂ ಅಧಿಕಾರಿ ಸದಸ್ಯರನ್ನೊಳಗೊಂಡ "ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ" ಯೊಂದನ್ನು ರಚಿಸಲಾಗಿದ್ದು, ಈ ಸಮಿತಿಯನ್ನು ಕಾಲಕಾಲಕ್ಕೆ ಮುಂದುವರಿಸುತ್ತಾ ಬಂದಿದ್ದು, ಅಂತಿಮವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ : 31–01–2009ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ಜೆ. ಚನ್ನಬಸಪ್ಪ, ಸರ್ಕಾರದ ಕಾರ್ಯದರ್ಶಿ (ನಿ) ರವರ ಅಧ್ಯಕ್ಷತೆಯಲ್ಲಿನ ಸಮಿತಿಯನ್ನು ದಿನಾಂಕ : 29–01–2009 ರಿಂದ ಎರಡು ವರ್ಷದವರೆಗೆ ಮುಂದುವರಿಸಲಾಗಿದೆ.

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಪಿಡಬ್ಲೂಡಿ 671 ಎಫ್‌ಸಿ–1/2009 ದಿನಾಂಕ : 03–02–2010ರಲ್ಲಿ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಆರ್ಥಿಕ ಅಧಿಕಾರದ ಮಿತಿಯನ್ನು ಹೆಚ್ಚಿಸಿರುವುದರಿಂದ ಈ ಬದಲಾವಣೆಗೆ ಅನುಗುಣವಾಗಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಪರಿಶೀಲಿಸುವ ಕಾಮಗಾರಿಗಳ ಅಂದಾಜುಗಳ ಅಧಿಕಾರದ ಮಿತಿಯನ್ನು ಸಹ ಮಾರ್ಪಡಿಸಿ ಆದೇಶ ಹೊರಡಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ : 23–03–2010ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಅಭಿಯಂತರರು ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 76 ಮಸಾವಿ 2010(1), ಬೆಂಗಳೂರು, ದಿನಾಂಕ : 18–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಜಲಸಂಪನ್ಮೂಲ ಇಲಾಖೆಯ ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜುಗಳ ಪಟ್ಟಿಯನ್ನು ಪರಿಶೀಲಿಸಿ ತೀರುವಳಿ ನೀಡಲು ರಚಿಸಲಾಗಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಮುಂದೆ ಮಂಡಿಸುವ ಅಂದಾಜು ಪಟ್ಟಿಗಳ ಮೊತ್ತದ ಕನಿಷ್ಠ ಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರೂ. 50.00 ಲಕ್ಷಗಳಿಂದ ರೂ. 200.00 ಲಕ್ಷಗಳಿಗೆ ಹೆಚ್ಚಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1281

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜುಗಳನ್ನು ಪರಿಶೀಲಿಸಲು ರಚಿಸಲಾಗಿರುವ ತಾಂತ್ರಿಕ ಸಮಿತಿಗಳ ಮುಂದೆ ಮಂಡಿಸುವ ಕಾಮಗಾರಿಗಳ ಅಂದಾಜು ಮೊತ್ತದ ಮಿತಿಯನ್ನು ಪರಿಷ್ಕರಿಸುವ ಹಾಗೂ ತಾಂತ್ರಿಕ ಸಮಿತಿಗಳನ್ನು ಪುನರ್‌ರಚಿಸುವ ಕುರಿತು ಆದೇಶ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 110 ಮಸಾವಿ 2005, ದಿನಾಂಕ : 18–10–2005.

2. ಪತ್ರ ಸಂಖ್ಯೆ : ಮುಸದ/ತಾಸ–4/ಸ.ಇಂ–10/ತಮೌನಿಸ/2009–10/1078 ದಿನಾಂಕ : 23–03–2010.

**ಪ್ರಸ್ತಾವನೆ:**

ಸಣ್ಣ ನೀರಾವರಿ ಇಲಾಖೆಯಿಂದ ಕೈಗೊಳ್ಳುವ ಕಾಮಗಾರಿಗಳ ಅಂದಾಜು ಮೊತ್ತ ರೂ. 30.00 ಲಕ್ಷಕ್ಕೂ ಮೇಲ್ಪಟ್ಟ ಹಾಗೂ ರೂ. 50.00 ಲಕ್ಷದವರೆಗಿನ ಮೊತ್ತದ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ಸಣ್ಣ ನೀರಾವರಿ ಇಲಾಖೆಯ ಆಯಾ (ದಕ್ಷಿಣ ಮತ್ತು ಉತ್ತರ) ವಲಯಕ್ಕೆ ಸಂಬಂಧಿಸಿದಂತೆ ಮುಖ್ಯ ಇಂಜಿನಿಯರ್ ರವರ ಅಧ್ಯಕ್ಷತೆಯಲ್ಲಿ ತಾಂತ್ರಿಕ ಸಮಿತಿಯನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಚಿಸಲಾಗಿದೆ.

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಪಿಡಬ್ಲೂಡಿ 671 ಎಫ್‌ಸಿ–1/2009 ದಿನಾಂಕ : 03–02–2010ರಲ್ಲಿ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಆರ್ಥಿಕ ಅಧಿಕಾರದ ಮಿತಿಯನ್ನು ಹೆಚ್ಚಿಸಿರುವುದರಿಂದ ಈ ಬದಲಾವಣೆಗೆ ಅನುಗುಣವಾಗಿ ಅಂದಾಜು ಪಟ್ಟಿಗಳನ್ನು ಪರಿಶೀಲಿಸುವ ಅಧಿಕಾರದ ಮಿತಿಯನ್ನು ಸಹ ಮಾರ್ಪಡಿಸುವಂತೆ ಹಾಗೂ ಅಸ್ತಿತ್ವದಲ್ಲಿರುವ ಅಧಿಕಾರಿ ಸದಸ್ಯರನ್ನೊಳಗೊಂಡ ಸಮಿತಿಗಳನ್ನು ಪುನರ್‌ರಚಿಸಿ ಆದೇಶ ಹೊರಡಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ : 23–03–2010ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಅಭಿಯಂತರರು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ.: ಸನೀಇ 76 ಮಸಾವಿ 2010(2), ಬೆಂಗಳೂರು, ದಿನಾಂಕ : 18–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಜಲಸಂಪನ್ಮೂಲ ಇಲಾಖೆಯ ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜುಗಳ ಪಟ್ಟಿಗಳನ್ನು ಕೆಳಕಂಡ ಆರ್ಥಿಕ ಮಿತಿಯೊಂದಿಗೆ ಪರಿಶೀಲಿಸಲು ಈ ಕೆಳಕಂಡಂತೆ ತಾಂತ್ರಿಕ ಸಮಿತಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ಪುನರ್‌ರಚಿಸಿದೆ.

**ಅ) ಸಣ್ಣ ನೀರಾವರಿ ದಕ್ಷಿಣ ವಲಯದಡಿ ಕೈಗೊಳ್ಳುವ ರೂ. 50.00ಲಕ್ಷ ಮೇಲ್ಪಟ್ಟು ಹಾಗೂ ರೂ. 200.00 ಲಕ್ಷಗಳವರೆಗಿನ ಅಂದಾಜು ಮೊತ್ತದ ಕಾಮಗಾರಿಗಳ ಪರಿಶೀಲನೆಗೆ ತಾಂತ್ರಿಕ ಸಮಿತಿ.**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು – ಅಧ್ಯಕ್ಷರು
2. ಮುಖ್ಯ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು – ಸದಸ್ಯರು
3. ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು/ಮೈಸೂರು – ಸದಸ್ಯರು
4. ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್‌ರವರು – ಸದಸ್ಯರು
5. ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಗುಣನಿಯಂತ್ರಣ ವಿಭಾಗ, ಬೆಂಗಳೂರು – ಸದಸ್ಯರು
6. ಕಾರ್ಯಪಾಲಕ ಇಂಜಿನಿಯರ್, (ವಿನ್ಯಾಸ) ಉಪ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದ) ವಲಯ, ಬೆಂಗಳೂರು – ಸದಸ್ಯ ಕಾರ್ಯದರ್ಶಿ

**ಆ) ಸಣ್ಣ ನೀರಾವರಿ (ಉ)ವಲಯ ಬಿಜಾಪುರದಡಿ ಕೈಗೊಳ್ಳುವ ರೂ. 50.00ಲಕ್ಷ ಮೇಲ್ಪಟ್ಟು ಹಾಗೂ ರೂ. 200.00 ಲಕ್ಷಗಳವರೆಗಿನ ಅಂದಾಜು ಮೊತ್ತದ ಕಾಮಗಾರಿಗಳ ಪರಿಶೀಲನೆಗೆ ತಾಂತ್ರಿಕ ಸಮಿತಿ.**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ – ಅಧ್ಯಕ್ಷರು
2. ಮುಖ್ಯ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು – ಸದಸ್ಯರು
3. ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಳಗಾಂ/ಗುಲ್ಬರ್ಗಾ – ಸದಸ್ಯರು
4. ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್‌ರವರು – ಸದಸ್ಯರು
5. ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಗುಣನಿಯಂತ್ರಣ ವಿಭಾಗ, ಧಾರವಾಡ – ಸದಸ್ಯರು
6. ಅಧೀಕ್ಷಕ ಇಂಜಿನಿಯರ್, (ವಿನ್ಯಾಸ) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ – ಸದಸ್ಯ ಕಾರ್ಯದರ್ಶಿ

**ಇ) ಸಣ್ಣ ನೀರಾವರಿ (ದಕ್ಷಿಣ) ವಲಯದ ಬೆಂಗಳೂರು/ಮೈಸೂರು ವೃತ್ತಗಳಡಿ ಕೈಗೊಳ್ಳುವ ರೂ. 30.00ಲಕ್ಷಕ್ಕೂ ಮೇಲ್ಪಟ್ಟ ಹಾಗೂ ರೂ. 50.00 ಲಕ್ಷಗಳವರೆಗಿನ ಕಾಮಗಾರಿಗಳ ಅಂದಾಜು ಮೊತ್ತದ ಪರಿಶೀಲನೆಗೆ ಉಪ ತಾಂತ್ರಿಕ ಸಮಿತಿ.**

1. ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ಬೆಂಗಳೂರು/ಮೈಸೂರು – ಅಧ್ಯಕ್ಷರು
2. ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ರವರ ಪ್ರತಿನಿಧಿ – ಸದಸ್ಯರು
3. ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್‌ರವರು – ಸದಸ್ಯರು
4. ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಗುಣನಿಯಂತ್ರಣ ವಿಭಾಗ, ಬೆಂಗಳೂರು – ಸದಸ್ಯರು
5. ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಉಪವಿಭಾಗ, ಬೆಂಗಳೂರು/ಮೈಸೂರು – ಸದಸ್ಯರು
6. ತಾಂತ್ರಿಕ ಸಹಾಯಕರು, ಸಣ್ಣ ನೀರಾವರಿ ವೃತ್ತ, ಬೆಂಗಳೂರು/ಮೈಸೂರು – ಸದಸ್ಯ ಕಾರ್ಯದರ್ಶಿ

**ಈ) ಸಣ್ಣ ನೀರಾವರಿ (ಉ) ವಲಯ ಬಿಜಾಪುರ ವ್ಯಾಪ್ತಿಯ ಬೆಳಗಾಂ/ಗುಲ್ಬರ್ಗಾ ವೃತ್ತಗಳಡಿ ಕೈಗೊಳ್ಳುವ ರೂ. 30.00ಲಕ್ಷಕ್ಕೂ ಮೇಲ್ಪಟ್ಟು ಮತ್ತು ರೂ. 50.00 ಲಕ್ಷಗಳವರೆಗಿನ ಅಂದಾಜು ಮೊತ್ತದ ಕಾಮಗಾರಿಗಳ ಪರಿಶೀಲನೆಗೆ ಉಪ ತಾಂತ್ರಿಕ ಸಮಿತಿ.**

1. ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ ಬೆಳಗಾಂ/ಗುಲ್ಬರ್ಗಾ – ಅಧ್ಯಕ್ಷರು
2. ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ರವರ ಪ್ರತಿನಿಧಿ – ಸದಸ್ಯರು
3. ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್‌ರವರು – ಸದಸ್ಯರು
4. ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಗುಣನಿಯಂತ್ರಣ ವಿಭಾಗ, ಧಾರವಾಡ – ಸದಸ್ಯರು
5. ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಉಪವಿಭಾಗ, ಬೆಳಗಾಂ/ಗುಲ್ಬರ್ಗಾ – ಸದಸ್ಯರು
6. ತಾಂತ್ರಿಕ ಸಹಾಯಕರು, ಸಣ್ಣ ನೀರಾವರಿ ವೃತ್ತ, ಬೆಳಗಾಂ/ಗುಲ್ಬರ್ಗಾ – ಸದಸ್ಯ ಕಾರ್ಯದರ್ಶಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1282

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ವಿಶ್ವ ಬ್ಯಾಂಕ್ ನೆರವಿನ ಜಲ ಸಂವರ್ಧನೆ ಯೋಜನಾ ಸಂಘದ ಮೂಲಕ ಅನುಷ್ಠಾನಗೊಳಿಸುತ್ತಿರುವ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯಡಿ 15 ಹೆಕ್ಟೇರ್‌ಗೂ ಮೇಲ್ಪಟ್ಟ ಹಾಗೂ 100 ಹೆಕ್ಟೇರ್‌ಗಿಂತ ಹೆಚ್ಚು ಅಚ್ಚುಕಟ್ಟು ಹೊಂದಿರುವ ಕೆರೆಗಳ ಅಭಿವೃದ್ಧಿಯನ್ನು ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :** ದಿನಾಂಕ : 06-10-2009ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ, ಇವರ ಪತ್ರ ಸಂಖ್ಯೆ : ಜ.ಸಂಯೋಸಂ/ಬೆಂ/ತಾಂತ್ರಿಕ/42/2009-10.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ 18 ಜಿಲ್ಲೆಗಳಲ್ಲಿ ಸಣ್ಣ ನೀರಾವರಿ ಇಲಾಖೆ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ ಇಲಾಖೆ ವ್ಯಾಪ್ತಿಗೆ ಒಳಪಡುವ ಆಯ್ದ 3923 ಕೆರೆಗಳ ಪುನಶ್ಚೇತನಗೊಳಿಸುವ ಕಾರ್ಯವನ್ನು ಎರಡು ಹಂತಗಳಲ್ಲಿ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯಡಿ ಜಲ ಸಂವರ್ಧನೆ ಯೋಜನಾ ಸಂಘದ ಮೂಲಕ 2002ರಿಂದ ವಿಶ್ವ ಬ್ಯಾಂಕ್ ನೆರವಿನೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಸಮುದಾಯದ ಎಲ್ಲಾ ವರ್ಗದ ಪ್ರತಿನಿಧಿಗಳನ್ನೊಳಗೊಂಡ ಕೆರೆ ಸಂಘಗಳನ್ನು ರಚಿಸಿ ಅವುಗಳ ಮೂಲಕ ಯೋಜನಾ ವರದಿ ತಯಾರಿಸಿ ಹಾಗೂ ಅದರಂತೆ ಯೋಜನೆ ಅನುಷ್ಠಾನಗೊಳಿಸಿ ನಂತರ ಪುನಶ್ಚೇತನಗೊಂಡ ಕೆರೆಗಳನ್ನು ಸಮುದಾಯಕ್ಕೆ ಹಸ್ತಾಂತರಿಸುವುದು ಸರ್ಕಾರದ ಉದ್ದೇಶವಾಗಿದೆ. ಈವರೆಗೆ ಸುಮಾರು 839 ಕೆರೆಗಳನ್ನು ಪುನಶ್ಚೇತನಗೊಳಿಸಿ ಉಸ್ತುವಾರಿ ಮತ್ತು ನಿರ್ವಹಣೆ ಜವಾಬ್ದಾರಿಯನ್ನು ಕೆರೆ ಬಳಕೆದಾರರ ಸಂಘಕ್ಕೆ ಹಸ್ತಾಂತರಿಸಲಾಗಿದೆ. ಹಂತ ಹಂತವಾಗಿ ಉಳಿದ ಕೆರೆಗಳನ್ನು ಅನುಷ್ಠಾನಗೊಳಿಸಿ ಹಸ್ತಾಂತರಿಸಲಾಗುವುದು.

ವಿಶ್ವ ಬ್ಯಾಂಕ್ ನೆರವಿನೊಂದಿಗೆ ಕೈಗೊಂಡಿರುವ ಈ ಯೋಜನೆಯ ಒಪ್ಪಂದದಲ್ಲಿ 20 ಹೆಕ್ಟೇರ್ ನಿಂದ 100 ಹೆಕ್ಟೇರ್ ಅಚ್ಚುಕಟ್ಟು ಹೊಂದಿರುವ ಕೆರೆಗಳ ಪುನಶ್ಚೇತನ ಕಾರ್ಯ ಕೈಗೊಳ್ಳುವ ಅವಕಾಶವಿದೆ. ಪ್ರಸ್ತುತ ಎರಡನೆ ಹಂತದಲ್ಲಿ ಕೈಗೊಳ್ಳುತ್ತಿರುವ ಕೆರೆಗಳ ಪುನಶ್ಚೇತನ ಕಾರ್ಯವನ್ನ 15 ಹೆಕ್ಟೇರ್‌ಗೂ ಮೇಲ್ಪಟ್ಟ ಹಾಗೂ 100 ಹೆಕ್ಟೇರ್‌ಗಿಂತ ಹೆಚ್ಚು ಅಚ್ಚುಕಟ್ಟು ಹೊಂದಿರುವ ಕೆರೆಗಳ ಅಭಿವೃದ್ಧಿಯನ್ನು ಕೈಗೊಳ್ಳಲು ಪ್ರಸ್ತಾಪಿಸಿದ್ದು, ಇದಕ್ಕೆ ವಿಶ್ವಬ್ಯಾಂಕ್ ಸಹ ಸಮ್ಮತಿಸಿರುತ್ತದೆ. ಹಾಗೂ ಈ ಪ್ರಸ್ತಾವನೆಗೆ ದಿನಾಂಕ 06–03–2009 ರಂದು ನಡೆದ 22ನೇ ಕಾರ್ಯಾಕಾರಿ ಸಮಿತಿಯಲ್ಲಿ ಚರ್ಚಿಸಿ ಸಮಿತಿಯ ಒಪ್ಪಿಗೆಯನ್ನು ಪಡೆಯಲಾಗಿದೆ ಎಂದು ತಿಳಿಸಿ ಈ ಬಗ್ಗೆ ಸರ್ಕಾರದ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕಾರ್ಯ ನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘದವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 8 ಜಸಂಯೋ 2009, ಬೆಂಗಳೂರು, ದಿನಾಂಕ : 18–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಪ್ರಸ್ತುತ ವಿಶ್ವಬ್ಯಾಂಕ್ ನೆರವಿನೊಂದಿಗೆ ಜಲಸಂವರ್ಧನೆ ಯೋಜನಾ ಸಂಘದ ಮೂಲಕ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯಡಿ ಕೈಗೊಳ್ಳುತ್ತಿರುವ ಕೆರೆಗಳ ಪುನಶ್ಚೇತನ ಕಾರ್ಯದಲ್ಲಿ 15 ಹೆಕ್ಟೇರ್ ಮೇಲ್ಪಟ್ಟ ಹಾಗೂ 100 ಹೆಕ್ಟೇರ್‌ಗಿಂತ ಹೆಚ್ಚು ಅಚ್ಚುಕಟ್ಟು ಹೊಂದಿರುವ ಕೆರೆಗಳನ್ನು ಆಯ್ಕೆ ಮಾಡಿಕೊಳ್ಳಲು ಸರ್ಕಾರವು ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1283

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಜಲ ಸಂವರ್ಧನೆ ಯೋಜನಾ ಸಂಘಕ್ಕೆ ಹಸ್ತಾಂತರಗೊಂಡಿರುವ ಸಣ್ಣ ನೀರಾವರಿ ಇಲಾಖೆಯ ಕೆರೆಗಳ ಅಭಿವೃದ್ಧಿ ಕೆಲಸ ಪ್ರಾರಂಭವಾಗುವವರೆಗೂ ಪ್ರವಾಹ ಅಥವಾ ಅತಿವೃಷ್ಟಿಯಿಂದ ಹಾನಿಯಾದ/ಹಾನಿಯಾಗುವಂತಹ ಸಂದರ್ಭಗಳಲ್ಲಿ ಕೆರೆಗಳ ನಿರ್ವಹಣೆಯನ್ನು ಇಲಾಖೆಯಿಂದಲೇ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :** 1. ಪತ್ರ ಸಂಖ್ಯೆ : ಮುಇಂ/ಸನೀ(ಉ)ವಲಯ/ವಿಜಾಪುರ/ತಾಂಸ–3/ಸಇಂ–1/ಪ್ರವಾಹ/2009–10/5931 ದಿನಾಂಕ : 08–10–2009.

**2.** ಪತ್ರ ಸಂಖ್ಯೆ : JSYS-BANG/Tech/64/2009-10/5269 ದಿನಾಂಕ :14–10–2009.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ 18 ಜಿಲ್ಲೆಗಳಲ್ಲಿ ಸಣ್ಣ ನೀರಾವರಿ ಇಲಾಖೆ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ವ್ಯಾಪ್ತಿಗೆ ಒಳಪಡುವ ಆಯ್ದ 3923 ಕೆರೆಗಳ ಪುನಶ್ಚೇತನಗೊಳಿಸುವ ಕಾರ್ಯವನ್ನು ಎರಡು ಹಂತಗಳಲ್ಲಿ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯಡಿ ಜಲ ಸಂವರ್ಧನೆ ಯೋಜನಾ ಸಂಘದ ಮೂಲಕ 2002ರಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಯೋಜನೆಯ ಅನುಷ್ಠಾನಕ್ಕಾಗಿ ಜಲ ಸಂವರ್ಧನೆ ಯೋಜನಾ ಸಂಘಕ್ಕೆ ಹಸ್ತಾಂತರಗೊಂಡಿರುವ ಕೆಲವು ಕೆರೆಗಳು ಭಾರಿ ಮಳೆ ಮತ್ತು ಪ್ರವಾಹದಿಂದ ಹಾನಿಗೊಳಗಾಗಿವೆ. ಹಾನಿಗೊಳಗಾದ ಕೆರೆಗಳ ದುರಸ್ತಿ/ಅಭಿವೃದ್ಧಿ ಕೆಲಸವನ್ನು ಕೈಗೊಳ್ಳುವ ಬಗ್ಗೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಹಾಗೂ (2)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯ ನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘದವರು ಸರ್ಕಾರದ ನಿರ್ದೇಶನ ಕೋರಿದ್ದಾರೆ.

ಈ ಬಗ್ಗೆ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 8 ಪ್ರನೀಕಾ 2009, ಬೆಂಗಳೂರು, ದಿನಾಂಕ : 18–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿವರಗಳ ಹಿನ್ನೆಲೆಯಲ್ಲಿ ಪುನಶ್ಚೇತನ ಕಾರ್ಯಕ್ಕಾಗಿ ಜಲ ಸಂವರ್ಧನೆ ಯೋಜನಾ ಸಂಘಕ್ಕೆ ಹಸ್ತಾಂತರಗೊಂಡಿರುವ/ಹಸ್ತಾಂತರಗೊಳ್ಳುತ್ತಿರುವ ಸಣ್ಣ ನೀರಾವರಿ ಇಲಾಖೆಯ ಕೆರೆಗಳು ಅತಿವೃಷ್ಟಿ/ಪ್ರವಾಹದಿಂದ ಹಾನಿಗೊಳಗಾಗಿದ್ದಲ್ಲಿ ಅವುಗಳ ದುರಸ್ತಿ ಕಾರ್ಯವನ್ನು ಜಲ ಸಂವರ್ಧನೆ ಯೋಜನಾ ಸಂಘದಿಂದ ಪುನಶ್ಚೇತನ ಕಾರ್ಯ ಪ್ರಾರಂಭವಾಗುವವರೆಗೂ ಸಣ್ಣ ನೀರಾವರಿ ಇಲಾಖೆವತಿಯಿಂದಲೇ ಕೈಗೊಳ್ಳುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1284

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಜಲ ಕಾಯಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಮಾಡಲು ರಾಜ್ಯ ಯೋಜನೆಯಡಿಯಲ್ಲಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಮುಸದ/ತಾಂಸ–1/ಸ.ಇಂ.1/2009–10/1723, ದಿನಾಂಕ 17–05–2010.

**ಪ್ರಸ್ತಾವನೆ :**

ಭಾರತ ಸರ್ಕಾರದ ಜಲಸಂಪನ್ಮೂಲ ಸಚಿವಾಲಯವು ರಾಷ್ಟ್ರವ್ಯಂತ ಅನ್ವಯವಾಗುವಂತೆ ಆದೇಶ ಸಂಖ್ಯೆ : 7/1/2009– WB ದಿನಾಂಕ : 2–03–2009 ರಲ್ಲಿ ಮೇಲ್ಕಂಡ ಯೋಜನೆಗೆ ಅನುಮೋದನೆ ನೀಡಿದೆ. ಈ ಯೋಜನೆಯನ್ನು "Scheme of Repair, Renovation and Restoration of Water Bodies with Domestic Support" ಎಂದು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ.

ಈ ಕಾರ್ಯಕ್ರಮದಡಿ ಅನುಮೋದನೆಗಾಗಿ ರಾಜ್ಯ ಸರ್ಕಾರವು ಸಲ್ಲಿಸಿದ್ದ ಪ್ರಸ್ತಾವನೆಗಳ ಪೈಕಿ ಸಣ್ಣ ನೀರಾವರಿ ಇಲಾಖೆಗೆ ಸಂಬಂಧಿಸಿದ ರೂ. 237.53 ಕೋಟಿ ಅಂದಾಜು ಮೊತ್ತದ 375 ಕಾಮಗಾರಿಗಳನ್ನು ಕೈಗೊಳ್ಳಲು ಭಾರತ ಸರ್ಕಾರವು ಪತ್ರ ಸಂಖ್ಯೆ FNo. 41 (3) PF-1/2009-807 ದಿನಾಂಕ 30–03–2010 ರಲ್ಲಿ ಅನುಮೋದನೆಯನ್ನು ನೀಡಿ ರೂ.74.04 ಕೋಟಿ ಮೊತ್ತವನ್ನು ಬಿಡುಗಡೆ ಮಾಡಿರುತ್ತದೆ. ಈ ಕಾಮಗಾರಿಗಳ ಪೈಕಿ ಉಲ್ಲೇಖಿತ ಪತ್ರದಲ್ಲಿ ಕೆಳಕಂಡ ಕಾಮಗಾರಿಗಳ ಅಂದಾಜುಗಳನ್ನು ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ರವರು ಸಲ್ಲಿಸಿರುತ್ತಾರೆ.

| ಕ್ರ. ಸಂ. | ಕಾಮಗಾರಿ ಹೆಸರು | ವಿನ್ಯಾಸಿತ ಅಚ್ಚುಕಟ್ಟು ಹೆಕ್ಟೇರ್‌ಗಳಲ್ಲಿ | ಪ್ರಸ್ತುತ ಇರುವ ಅಚ್ಚುಕಟ್ಟು ಹೆಕ್ಟೇರ್‌ಗಳಲ್ಲಿ | ಪುನರುಜ್ಜೀವನ ಗೊಳಿಸುವ ಅಚ್ಚುಕಟ್ಟು ಹೆಕ್ಟೇರ್‌ಗಳಲ್ಲಿ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|---|---|
| 1. | ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕು ಮಾವತ್ತೂರು ಕೆರೆ ಅಭಿವೃದ್ಧಿ | 720.00 | 576.00 | 144.00 | 260.00 |
| 2. | ಕೋಲಾರ ಜಿಲ್ಲೆ ಬಂಗಾರಪೇಟೆ ತಾಲ್ಲೂಕು ಮುಷ್ಟಹಳ್ಳಿ ಕೆರೆ ಅಭಿವೃದ್ಧಿ | 449.00 | 382.00 | 43.30 | 224.50 |
| | **ಒಟ್ಟು** | | | | **484.50** |

ಈ ಯೋಜನೆಯ ಅನುಷ್ಠಾನಕ್ಕಾಗಿ 2010–2011 ನೇ ಸಾಲಿನ ಆಯವ್ಯಯದಲ್ಲಿ **ಲೆಕ್ಕ ಶೀರ್ಷಿಕೆ 4702–00–101–1–09–132 ಕೃಷಿಗೆ ನೇರವಾಗಿ ಸಂಬಂಧಿಸಿದ ನೀರಾವರಿ ಯೋಜನೆಗಳ ದುರಸ್ತಿ, ನವೀಕರಣ ಹಾಗೂ ಪುನರುಜ್ಜೀವನ** ರಡಿ ರೂ.5652.65 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ : ಸನೀಇ 26 ಕೆಜಿದು 2010 (1), ಬೆಂಗಳೂರು, ದಿನಾಂಕ : 19–05–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ವ್ಯಾಪ್ತಿಗೆ ಬರುವ ಮೇಲ್ಕಂಡ ಎರಡು ಕಾಮಗಾರಿಗಳ ಒಟ್ಟು ರೂ. 484.50 ಲಕ್ಷ (ರೂ. ನಾಲ್ಕು ನೂರ ಎಂಬತ್ತನಾಲ್ಕು ಲಕ್ಷ ಐವತ್ತು ಸಾವಿರ ಮಾತ್ರ) ಮೊತ್ತದ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಯೋಜನೆಯನ್ನು ಮಾರ್ಗಸೂಚಿಯಲ್ಲಿ ಭಾರತ ಸರ್ಕಾರವು ತಿಳಿಸಿರುವ ನಿಬಂಧನೆಗಳಂತೆ ಅನುಷ್ಠಾನಗೊಳಿಸತಕ್ಕದ್ದು.
2) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
3) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
4) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
5) ಕಾಮಗಾರಿಯ ಅಂದಾಜು ಪಟ್ಟಿಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯ ತೀರುವಳಿ ಪಡೆಯುವುದು.

6) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
9) ಇ.ಐ.ಆರ್.ಎಲ್./ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
10) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11) ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16-05-2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1311 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಜಲ ಕಾಯಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಮಾಡಲು ರಾಜ್ಯ ಯೋಜನೆಯಡಿಯಲ್ಲಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಮುಸದ/ತಾಂಸ-1/ಸ.ಇಂ.1/2009-10/1723, ದಿನಾಂಕ 17-05-2010.

**ಪ್ರಸ್ತಾವನೆ :**

ಭಾರತ ಸರ್ಕಾರದ ಜಲಸಂಪನ್ಮೂಲ ಸಚಿವಾಲಯವು ರಾಷ್ಟ್ರಾದ್ಯಂತ ಅನ್ವಯವಾಗುವಂತೆ ಆದೇಶ ಸಂಖ್ಯೆ : 7/1/2009- WB ದಿನಾಂಕ : 2-03-2009 ರಲ್ಲಿ ಮೇಲ್ಕಂಡ ಯೋಜನೆಗೆ ಅನುಮೋದನೆ ನೀಡಿದೆ. ಈ ಯೋಜನೆಯನ್ನು "Scheme of Repair, Renovation and Restoration of Water Bodies with Domestic Support" ಎಂದು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ.

ಈ ಕಾರ್ಯಕ್ರಮದಡಿ ಅನುಮೋದನೆಗಾಗಿ ರಾಜ್ಯ ಸರ್ಕಾರವು ಸಲ್ಲಿಸಿದ್ದ ಪ್ರಸ್ತಾವನೆಗಳ ಪೈಕಿ ಸಣ್ಣ ನೀರಾವರಿ ಇಲಾಖೆಗೆ ಸಂಬಂಧಿಸಿದ ರೂ. 237.53 ಕೋಟಿ ಅಂದಾಜು ಮೊತ್ತದ 375 ಕಾಮಗಾರಿಗಳನ್ನು ಕೈಗೊಳ್ಳಲು ಭಾರತ ಸರ್ಕಾರವು ಪತ್ರ ಸಂಖ್ಯೆ FNo. 41 (3) PF-1/2009-807 ದಿನಾಂಕ 30-03-2010 ರಲ್ಲಿ ಅನುಮೋದನೆಯನ್ನು ನೀಡಿ ರೂ.74.04 ಕೋಟಿ ಮೊತ್ತವನ್ನು ಬಿಡುಗಡೆ ಮಾಡಿರುತ್ತದೆ. ಈ ಕಾಮಗಾರಿಗಳ ಪೈಕಿ ಉಲ್ಲೇಖಿತ ಪತ್ರದಲ್ಲಿ ಕೆಳಕಂಡ ಕಾಮಗಾರಿಗಳ ಅಂದಾಜುಗಳನ್ನು ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ರವರು ಸಲ್ಲಿಸಿರುತ್ತಾರೆ.

| ಕ್ರ. ಸಂ. | ಕಾಮಗಾರಿ ಹೆಸರು | ವಿನ್ಯಾಸಿತ ಅಚ್ಚುಕಟ್ಟು ಹೆಕ್ಟೇರ್‌ಗಳಲ್ಲಿ | ಪ್ರಸ್ತುತ ಇರುವ ಅಚ್ಚುಕಟ್ಟು ಹೆಕ್ಟೇರ್‌ಗಳಲ್ಲಿ | ಪುನರುಜ್ಜೀವನ ಗೊಳಿಸುವ ಅಚ್ಚುಕಟ್ಟು ಹೆಕ್ಟೇರ್‌ಗಳಲ್ಲಿ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|---|---|
| 1. | ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕು ಸಿ.ಎಸ್.ಪುರ ಕೆರೆ ಅಭಿವೃದ್ಧಿ | 474.00 | 424.00 | 50.00 | 259.00 |
| 2. | ಕೋಲಾರ ಜಿಲ್ಲೆ ಬಂಗಾರಪೇಟೆ ತಾಲ್ಲೂಕು ರಾಮಸಾಗರ ಕೆರೆ ಅಭಿವೃದ್ಧಿ | 441.52 | 341.00 | 43.72 | 220.76 |
| | **ಒಟ್ಟು** | | | | **479.76** |

ಈ ಯೋಜನೆಯ ಅನುಷ್ಠಾನಕ್ಕಾಗಿ 2010-2011 ನೇ ಸಾಲಿನ ಆಯವ್ಯಯದಲ್ಲಿ **ಲೆಕ್ಕ ಶೀರ್ಷಿಕೆ 4702-00-101-1-09-132 ಕೃಷಿಗೆ ನೇರವಾಗಿ ಸಂಬಂಧಿಸಿದ ನೀರಾವರಿ ಯೋಜನೆಗಳ ದುರಸ್ತಿ, ನವೀಕರಣ ಹಾಗೂ ಪುನರುಜ್ಜೀವನ** ರಡಿ ರೂ.5652.65 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ : ಸನೀಇ 26 ಕೆಜಿದು 2010 (2), ಬೆಂಗಳೂರು, ದಿನಾಂಕ : 19–05–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ವ್ಯಾಪ್ತಿಗೆ ಬರುವ ಮೇಲ್ಕಂಡ ಎರಡು ಕಾಮಗಾರಿಗಳ ಒಟ್ಟು ರೂ. 479.76 ಲಕ್ಷ (ರೂ. ನಾಲ್ಕು ನೂರ ಎಪ್ಪತ್ತೊಂಬತ್ತು ಲಕ್ಷ ಎಪ್ಪತ್ತಾರು ಸಾವಿರ ಮಾತ್ರ) ಮೊತ್ತದ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಯೋಜನೆಯನ್ನು ಮಾರ್ಗಸೂಚಿಯಲ್ಲಿ ಭಾರತ ಸರ್ಕಾರವು ತಿಳಿಸಿರುವ ನಿಬಂಧನೆಗಳಂತೆ ಅನುಷ್ಠಾನಗೊಳಿಸತಕ್ಕದ್ದು.
2) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
3) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
4) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
5) ಕಾಮಗಾರಿಯ ಅಂದಾಜು ಪಟ್ಟಿಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯ ತೀರುವಳಿ ಪಡೆಯುವುದು.
6) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
9) ಇ.ಐ.ಆರ್.ಎಲ್./ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
10) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11) ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1312 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಒಳಾಡಳಿತ ಸಚಿವಾಲಯ

**ವಿಷಯ :** ದಿವಂಗತ ಶ್ರೀ ವಿ.ಸಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಗೆ ಮಂಜೂರಾತಿ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂ : ಲಾ 225 ಪಿಪಿಇ 91, ದಿನಾಂಕ 14–06–94.
2. ಸರ್ಕಾರದ ಆದೇಶ ಸಂ : ಲಾ 65 (1) ಪಿಪಿ ಇ 97, ದಿನಾಂಕ 19–06–1997.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ.1/118/2008–09, ದಿನಾಂಕ 15–01–2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ಕ್ರ.ಸಂ. 32 ರನ್ವಯ ದಿವಂಗತ ಶ್ರೀ ವಿ.ಸಿ.ಪಾಟೀಲ್‌ರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಗೊಂಡು, ದಿನಾಂಕ 23–06–1994 ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದಾರೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ದಿವಂಗತ ಶ್ರೀ ವಿ.ಸಿ. ಪಾಟೀಲ್‌ರವರು ದಿನಾಂಕ 23–06–1994 ರಂದು ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿರುತ್ತದೆ.

ಮೇಲೆ (3) ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ 15–01–2009 ರ ಪತ್ರದಲ್ಲಿ, ಮೇಲೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳ ಹಿನ್ನಲೆಯಲ್ಲಿ ಹಾಗೂ ಸರ್ಕಾರದ ಅಧಿಕೃತ ಜ್ಞಾಪನ ಸಂ : ಎಫ್‌ಡಿ 1 ಎಸ್‌ಆರ್‌ಪಿ 85, ದಿನಾಂಕ 22–01–1985 ರಲ್ಲಿ ಆಯ್ಕೆಕಾಲಿಕ ವೇತನ ಶ್ರೇಣಿಯ ಮಂಜೂರಾತಿ ವಿಧಿಸಿರುವ ನಿಬಂಧನೆಗಳನ್ನು ಸದರಿಯವರು ಪೂರೈಸಿರುವುದರಿಂದ, ಸದರಿಯವರು ಆಯ್ಕೆಕಾಲಿಕ ವೇತನ ಶ್ರೇಣಿಯ ಮಂಜೂರಾತಿ ಸೌಲಭ್ಯಕ್ಕೆ ಅರ್ಹರಿರುತ್ತಾರೆ. ಆದ್ದರಿಂದ, ದಿವಂಗತ ಶ್ರೀ ವಿ.ಸಿ.ಪಾಟೀಲ್‌ರವರಿಗೆ ದಿನಾಂಕ 23–06–2004 ರಿಂದ ಜಾರಿಗೆ ಬರುವಂತೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿ, ಕಾಲಕಾಲಕ್ಕೆ ವೇತನವನ್ನು ನಿಗದಿಪಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಈ ಸಂಬಂಧ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಹೆಚ್‌ಡಿ 65 ಪಿಪಿಇ 2009, ಬೆಂಗಳೂರು, ದಿನಾಂಕ : 20–05–2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನಲೆಯಲ್ಲಿ ದಿವಂಗತ ಶ್ರೀ ವಿ.ಸಿ.ಪಾಟೀಲ್‌ರವರು ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವೆಗಳು (ಕಾಲಬದ್ಧ ಮುಂಬಡ್ತಿ) ನಿಯಮಗಳು 1985 ರನ್ವಯ ದಿನಾಂಕ 23–06–2004 ರಿಂದ ಜಾರಿಗೆ ಬರುವಂತೆ ರೂ. 6000–150–7200–200–8800–260–10880–320–11200 ರಿಂದ ಆಯ್ಕೆ ಕಾಲಿಕ ವೇತನ ಶ್ರೇಣಿಯಾದ ರೂ. 6300–150–7200–200–8800–260–10880–320–11840ರ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂ : ಆಇ 451 ಸೇ–2/2008, ದಿನಾಂಕ 04–11–2009 ರಲ್ಲಿ ನೀಡಿರುವ ಸಹಮತಿ/ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ.ಸಿ. ಸಿದ್ದಪ್ಪ),**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 1313

## ಕೃಷಿ ಸಚಿವಾಲಯ

**ವಿಷಯ :** ರೈತರಿಗೆ ಹಾವು ಕಡಿತಕ್ಕೆ ಪರಿಹಾರ.

**ಓದಲಾಗಿದೆ** :

1. ಸರ್ಕಾರದ ಆದೇಶ ಸಂ : ಕೃತೋಇ/280/ಕೃಉಇ/2003, ಬೆಂಗಳೂರು, ದಿ. 18.07.2003.
2. 2010–11 ನೇ ಸಾಲಿನ ರಾಜ್ಯದ ಆಯವ್ಯಯ ಭಾಷಣದಲ್ಲಿನ ಘೋಷಣೆ ಸಂಖ್ಯೆ 39.
3. ಕೃಷಿ ಆಯುಕ್ತರ ಪತ್ರ ಸಂ : ಪಿಎಲ್‌ಎನ್/3/ಟಿಡಿಎಸ್/2010–11, ದಿ : 30–03–2010 ಮತ್ತು 27–04–2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಸಾಲ ನೀಡುವ ಸಂಸ್ಥೆಗಳಿಂದ ಪಡೆದ ಸಾಲದ ಹೊರೆಯಿಂದ ಮಾತ್ರ ಆತ್ಮಹತ್ಯೆ ಮಾಡಿಕೊಂಡ ಪ್ರತಿಯೊಂದು ರೈತರ ಕುಟುಂಬಗಳಿಗೆ ತಲಾ ರೂ.1.00 ಲಕ್ಷ ನಗದು ಪರಿಹಾರ ನೀಡಲು ಆದೇಶಿಸಿದೆ. ಮುಂದುವರೆದು, ಇಂತಹ ಆತ್ಮಹತ್ಯೆಗಳಿಗೆ ಸಾಲ ನೀಡುವ ಸಂಸ್ಥೆಗಳಿಂದ ಪಡೆದ ಸಾಲದ ಹೊರೆಯೇ ಕಾರಣ ಎಂಬ ವಿಷಯವನ್ನು ಖಾತರಿ ಮಾಡಿಕೊಂಡು ದೃಢೀಕರಣ ಪತ್ರವನ್ನು ನೀಡುವ ಸಲುವಾಗಿ ಕಂದಾಯ ಇಲಾಖೆಯ ಪ್ರತಿ ವಿಭಾಗೀಯ ಆಯುಕ್ತರವರ (ಉಪ ವಿಭಾಗಾಧಿಕಾರಿ) ಅಧ್ಯಕ್ಷತೆಯಲ್ಲಿ ಅಧಿಕಾರಿಗಳ ಸಮಿತಿಯೊಂದನ್ನು ರಚಿಸಲು ಸಹ ಸರ್ಕಾರದ ಮಂಜೂರಾತಿ ನೀಡಿದೆ.

ಮೇಲೆ (2) ರಲ್ಲಿ ತಿಳಿಸಿದಂತೆ, ರಾಜ್ಯದ 2010–11ನೇ ಆಯವ್ಯಯ ಭಾಷಣದಲ್ಲಿ ಹಾವು ಕಡಿತದಿಂದ, ತೆಂಗು ಅಡಿಕೆ ಮರಗಳಿಂದ ಬೀಳುವುದರಿಂದ, ಅಥವಾ ಇತರೆ ಕೃಷಿ ಸಂಬಂಧಿತ ಆಕಸ್ಮಿಕಗಳಿಂದ ಮರಣ ಹೊಂದಿದ ರೈತರು ಮತ್ತು ಕೃಷಿ ಕಾರ್ಮಿಕರ ಕುಟುಂಬಗಳಿಗೆ ರೂ. 1.00 ಲಕ್ಷ ಸಹಾಯಧನ ನೀಡಲಾಗುವುದು. ಬೆಂಕಿ ಆಕಸ್ಮಿಕದಿಂದ ಹುಲ್ಲುಮೆದೆ/ಬಣವೆಗಳು ನಷ್ಟವಾದ ಪ್ರಕರಣಗಳಲ್ಲಿ ರೂ.10,000/– ದವರೆಗೆ ಪರಿಹಾರ ನೀಡಲಾಗುವುದು ಎಂದು ಘೋಷಿಸಲಾಗಿದೆ.

